# ಕಾಂತೆಯ ಹೆಸರಿನ ಗ್ರಂಥ
# ಭಾಮತಿ

ತ್ರಿಭುವನ ಮಂಗಳ, ಶಿವಗೃಹದಂಗಳ,
ತುಂಗ ಹಿಮಾಚಲ ಶೃಂಗದಲಿ.
ತತ್ವ-ಸಮಾಧಿ ವಿಲೀನ-ಮುನೀಶ್ವರ,
ಸಾಧನ-ಬೋಧನ ರಂಗದಲಿ. ॥1॥

ಗಂಗೆಯ, ತರಲ ತರಂಗೆಯ,
ಕಲಿಮಲ ಭಂಗೆಯ ತಡಿಯುತ್ಸಂಗದಲಿ
ತುಂತುರು ಸಿಂಚಿತ, ಪರಿಮಳ ಸಂಚಿತ,
ಪವನದ ಪಾವನ ಸಂಗದಲಿ. ॥2॥

"ವಾಚಸ್ಪತಿ ಮಿಶ್ರ"ರ, ಶಾಂತಾಶ್ರಮ,
ಭಗವತಿ ಸರಸತಿ ರಸಪೀಠ.
ನಿಂತಿದೆ ಮೌನದ ಗುಮ್ಮಟ ಕಟೆಯುವ,
ಕಮ್ಮಟದೋಲ್ ವರಬ್ರಹ್ಮಮಠ. ॥3॥

ಶ್ರೀಕರ ಮಂದಾಕಿನಿ, ಜಲ ಶೀಕರ.
ಧುಮುಕಿಸಿ ಚಿಮುಕಿಸಿ ಅಂಗಳವ,
ಸಾರಿಸಿ ಥಳಿ ರಂಗೋಲಿಯ ಹಾಕಿತು,
ಹಾಡುತ ಉಲಿಯುತ ಮಂಗಳವ. ॥4॥

ಇಕ್ಕೆಲ ತರು ಕೋಟರದ ಕುಟೀರದ,
ರೆಕ್ಕೆಯ ಋಷಿಗಳು ಧ್ಯಾನದಲಿ.
ದೀಕ್ಷೆಯ ಪಡೆದಿವೆ, ಮೌನವ ಹಿಡಿದಿವೆ.
ಕುಳಿತಿವೆ ಶಿಷ್ಯರ ಸ್ಥಾನದಲಿ. ॥5॥

ಗುಡಿಸಲು ಹೊದಿಸಿದ ಒಣಗಿದ ತರಗೆಲೆ ,
ತೊಂಗುವ ತೆಂಗಿನ ಪೊರಕೆಯಲಿ.

ಮಾರುತ ಮರ್ಮರ ಗೈಯದೇ ಮೆಲ್ಲಡಿ,
ಇಡುತಿದೆ ಹೊಂಗೆಯ ಗರಿಕೆಯಲಿ. II6II

ಸಪ್ಪಳ ಮಾಡದೆ, ಗಪ್ಪನೆ ಹರಿಯಲು,
ಸನ್ನೆಯ ಗೈಯುತ ತೆರೆಗಳಿಗೆ.
ದಡದಲಿ ಬೆಳೆದಿಹ ಗಿಡಗಳು ಕುಳಿತವು
ಬ್ರಹ್ಮ ಸಮಾಧಿಯ ಸ್ಥಿತಿಯೊಳಗೆ II7II

ಮೌನದ ಮನೆಯಲಿ, ಗೂಢತೆ ಗರ್ಭದಿ,
ವೇದಾಂತದ ಘನ ಗವ್ಹರದಿ
ವಿದ್ಯಾರಣ್ಯದ ವೃದ್ಧ ಮೃಗೇಂದ್ರವು,
ಮೆರೆದಿದೆ ಮೋಕ್ಷದುಪವ್ಹರದಿ II8II

ವರ ವೈರಾಗ್ಯವೆ, ವಾಚಸ್ಪತಿಗಳ,
ರೂಪದಿ ಪರಿಣತಿಗೊಂಡಿಹುದು
ಬಾಳಿನ ಗೋಳಿಗೆ, ಜನಿ ಮೃತಿ ಪಾಳಿಗೆ,
ಪೂರ್ಣವಿರಾಮವ ಕಂಡಿಹುದು II9II

ಬದುಕಿನ ಭೋಗದ ಬಟ್ಟಲಕ್ಹಿಡಿದಿಹ,
ಕಿಲುಬಿಗೆ ಹುಳಿಯನು ಹಿಂಡಿದರು.
ಜೀರ್ಣಾರಣ್ಯದ ಪರ್ಣ ಕುಟೀರದಿ,
ಪೂರ್ಣಾನಂದವನುಂಡಿಹರು II10II

ಅರವತ್ತರ ಅರಮರಿವಿನ ದಶೆಯಲಿ
*(1)ಅರಿವಿರಲಿ ಪರಿಬಿಟ್ಟಿಹುದು
ನರೆತಿಹ ಮುನಿಶಿರ, ಶಾರದೆ-
ಯೇರುವ ಶ್ವೇತಾಸನ ಸಿರಿ ತೊಟ್ಟಿಹುದು II11II

ತಂಪಿನ ಗಾಳಿಗೆ, ಕಂಪಿನ ದಾಳಿಗೆ,
ಪ್ರತಿದಿನ ಅರುಣನು ಕಣ್ತೆರೆಯೆ
ದಿಗ್ ದೇವಾಲಯದೋಕುಳಿ ಹೊಂಡದಿ,
ಉಷೆ ನಿಶೆ ಜೀಕಳಿ ಕೆಂಪೆರೆಯೆ II12II

ನಭನಕ್ಷತ್ರದ ಕ್ಷೇತ್ರದ ಯಾತ್ರಿ,
ಸಪ್ತರ್ಷಿಗಳಾ ಮಂಡಲವು.
ಪ್ರಾತಃ ಸ್ನಾನಕೆ ಪಡುವಲ ಕಡಲಿಗೆ,
ಇಳಿಯಲು ದೌಶ್ರುತಿ ಕುಂಡಲವು II13II

ಮಿಶ್ರರು ಎದ್ದರು, ಜ್ಞಾನ ಪ್ರಬುದ್ಧರು,
ಸಿದ್ಧರು ಶುದ್ಧರು ನಸುಕಿನಲಿ.
ನದಿಯೆಡೆ ನಡೆದರು, ತಡೆಯುವ ಛಳಿಯನು
ತುಳಿಯುತ ಕಾಲಡಿ ಉಸುಕಿನಲಿ II14II

ನದಿಯಲಿ ಮಿಂದರು, ನೀರಲಿ ನೆಂದರು,
ಎಂದರು ಗಂಗಾ ಗಂಗೇತಿ
ಭಸ್ಮಸ್ನಾನವ, ಮೃತ್ತಿಕಾ ಸ್ನಾನವ,
ಮಾಡು ಸೋಽಹಂ ಬ್ರಹ್ಮೇತಿ
.........................
* (1) ಅರಿವಿವರಲಿ =ಅರಿವು, ಜ್ಞಾನ ತಿಳುವಳಿಕೆಯ ಇವರಲ್ಲಿ.

ಚಳಿಗೆದೆಗುಂದರು, ನೀರಲಿ ನಿಂದರು,
ಅಂದರು ಅಘವರ್ಷಣ ಮಂತ್ರ.
ತೀರ್ಥದಿ ಕೇಂದ್ರಿತ ಕಿಲ್ಬಿಷ ತೊಳೆದರು,
ಸಂತರು ಕೊಳೆಕರ್ಷಣ ಯಂತ್ರ II16II

ಒದ್ದೆಯನುಟ್ಟರು, ಅರ್ಘ್ಯವ ಕೊಟ್ಟರು,
ತರ್ಪಣ ಬಿಟ್ಟರು ಋಷಿಗಳಿಗೆ.
ಮಾಸಿದ ಬಟ್ಟೆಯನಲ್ಲಿಯೆ ಇಟ್ಟರು,
ಏತರ ಕಾಳಜಿ ಮುನಿಗಳಿಗೆ ! II17II

ಮನೆಗೈ ತಂದರು, ಶಿವಶಿವ ಎಂದರು,
ಪ್ರಭುವನು ನೆನ್ದರು ಚಿತ್ತದಲಿ
ದಿವಸಕೆ ಒಮ್ಮೆಯೆ ಗುಡಿಸಲು ಬಿಡುವರು,
ಗಂಗಾಸ್ನಾನ ನಿಮಿತ್ತದಲಿ II18II

ಎಲೆಮನೆ ಗುಡಿಸಿದೆ. ಥಳಿ ಸಿಂಪಡಿಸಿದೆ,
ಬಿಡಿಸಿದೆ ಜಗಲಿಗೆ ರಂಗೋಲಿ.
ಮಣೆ ಅಣಿಯಾಗಿದೆ, ಪ್ರಣತಿಯು ಬೆಳಗಿದೆ,
ತೊಳೆದಿಟ್ಟಿದೆ ತೀರ್ಥದ ಥಾಲಿ ॥19॥

ಕಲಶವ ತುಂಬಿದೆ, ತುಳಸಿಯ ತಂದಿದೆ,
ಗಂಧವ ತೆಗೆದಿಟ್ಟಿದೆ ಮುಂದೆ.
ಫುಲ್ಲ-ಗುಲಾಬಿಯು ಮಲ್ಲಿಗೆ, ಜಲ್ಲಿಯೊ-
-ಳಲ್ಲಿವೆ ಧೂಪಾರತಿ ಹಿಂದೆ ॥20॥

ಪೂಜೆಯು ಮುಗಿಯಲು, ಗಂಟೆ ಬಾರಿಸೆ,
ಬಂದಿತು ನೈವೇದ್ಯದ ತಟ್ಟೆ.
ಕಲ್ಲಿನ ದೇವರ ಬಾಯೊಳು ನೀರೊಡೆ-
-ಯಿತು, ಅಡಿಗೆಯ ವಾಸನೆ ತಟ್ಟಿ ॥21॥

ಪೀಠವ ಹಾಕಿದೆ, ತಾಟನು ಬಡಿಸಿದೆ,
ವಾಟಿಕೆಯಲಿ ಪಂಚಾಮೃತವು.
ಹಸುರೆಲೆ ಶಾಕವು, ರಸಮಯ ಪಾಕವು,
ವ್ಯಂಜನ-ದದಿ-ಮಧು-ಗೋಘೃತವು ॥22॥

ನಿಷ್ಪೃಹಿ ಮಿಶ್ರರು, ರಸ-ರುಚಿ ವಿಮುಖರು,
ದೇವ ಪ್ರಸಾದವು ಎಂದಂದು.
ತುತ್ತುತುತ್ತಿಗೆ ಗೋವಿಂದನ ನೆನೆಯುತ,
ಭಕ್ಷ್ಯಗಳೆಳೆವರು ಒಂದೊಂದು ॥23॥

ತೊಳೆಯಲು ಕಾದಿದೆ, ಬೆಚ್ಚನೆ ನೀರಿನ,
ತುಂಬಿದ ತಂಬಿಗೆ ಬಚ್ಚಲಲಿ.
ಒರೆಸಲು ಪಂಚಿಕೆ, ನುರಿಸಲು ರಸತಾಂ-
ಬೂಲವು, ಅಂಗಣ ಹೊಚ್ಚಲಲಿ ॥24॥

ಮೊಗಸಾಲೆಯ ವೇದಾಂತದ ವೇದಿಕೆ-
-ಯಲಿ ಮುನಿ ಕುಳಿತರು ಆಸನದಿ,
ತಾಡಾವಲಿಯಲಿ ಶಾರದೆ ಕುಣಿದಳು,
ಮುನಿಮಿದುಳಿನ ಅನುಶಾಸನದಿ ॥25॥

ಗ್ರಂಥದ ರನ್ನದ ಕನ್ನಡಿಯಲಿ ಶ್ರೀ-
-ವೇದವ್ಯಾಸರೆ ಮೂಡಿಹರು.
ಭಗವತ್ಪಾದರು, ಶ್ರೀ ಗೌಡಪಾದರು,
ಪುನರಪಿ ನುಡಿಯಲಿ ಆಡಿಹರು ॥26॥

ಬೌದ್ಧರ ಖಂಡನ, ಜೈನರ ಮುಂಡನ,
ಮಾಯಾವಾದದ ಮಂಡನವು,
ಖಂಡತುಂಡ ವಾಕ್ ಖಂಡದಿ ನಡೆಯಿತು
'ಸೋಽಹಂ' ತತ್ವದ ತಾಂಡವವು ॥27॥

ಹೃದಯ ಮಿದುಳಿನ ಮೃಡ ಮುಡಿ ಮಡಿಲಲಿ,
ತಿಳಿವಿನ ತಡೆಸಲು ಧುಮುಕಿಹುದು,
ಪುಸ್ತಕ-ಪರ್ವತ-ಮಸ್ತಕದಲಿ ಚಿನ್-
-ಮಂದಾಕಿನಿ ರಸ ಚಿಮುಕಿಹುದು ॥28॥

ಹೀಗೆಯೆ ಸಾಗಿದೆ ಜ್ಞಾನೋಪಾಸನೆ,
ಸೇವೆಗೆ ಸವೆಯುವ ಕೈ ಮಾತ್ರ.
ನಿತ್ಯವು ತತ್ವ ಸಮಾಧಿಯ ಕಣ್ಣಿಗೆ,
ಕಾಣದು ಸನ್ನಾಹದ ಸೂತ್ರ ॥29॥

ದಿನಗಳು ಉರುಳಿವೆ, ತಿಂಗಳು ತೆರಳಿವೆ,
ಋತುಗಳು ಎಷ್ಟೋ ಹೊರಳಿದವು,
ಮರುಷೋಪವವದಿ ಅರವತ್ತೊರೆದೊರೆ
ಚೈತ್ರದ ಕುಟ್ಮಲವರಳಿದವು ॥30॥

**ಎಸಳು ಎರಡು**

ಆರ್ದ್ರ ಶತಕದ ಋಷಿ-ವಾಙ್ಮಯ-ತಪ-ಹಣ್-
-ಗೊಂಡಿದೆ, ಗ್ರಂಥದ ರೂಪದಲಿ.

ಕೃತಕೃತ್ಯತೆ ಉಸಿರೆಳೆದಿದೆ, ಮಿಶ್ರರ,
ಮೈಯ್ಯುರಿಸಿದ ಚಿದ್‌ಧೂಪದಲಿ ॥31॥

ಒಂದಿನ ಮಿಶ್ರರು, ತೀರಕೆ ಬಂದರು,
ಮಿಂದರು ಮಂದಾಕಿನಿಯಲ್ಲಿ
ತೀರದಿ ನಿಂದರು, ಅರ್ಘ್ಯವ ತಂದರು
ಸಂಧ್ಯೆಯ ವಂದಿಸಿದರು ಅಲ್ಲಿ ॥32॥

ಕಂಡಿತು ಸುಂದರ ಮುಗಿಲಿನ ಹಂದರ,
ಚಿಕ್ಕೆಯ ಚಂದಿರ ಕಂದರವು.
ಸಂಧ್ಯೆಯು ಮುಂದಿರೆ, ಸರ್ವ-ವಸುಂಧರೆ,
ಎಷ್ಟು ಚೆಂದ ಜಗ ಮಂದಿರವು! ॥33॥

ಸಂಧ್ಯೆ ಪುರಂಧ್ರಿಯ ಸ್ಮರಸಂಕೇತಕೆ,
ಕಾಂತಿಯ ಕಿಂಶುಕ ಅರಳಿತ್ತು.
ಸುರಮಂದಾಕಿನಿ ತೆರೆ ತೂರಾಡುತ,
ಮರಿ ಮಂದಾನಿಲ ತೆರಳಿತ್ತು ॥34॥

ಕುಸುಮಿತ ಕಾನನ, ವಿಕಸಿತ ಆನನ,
ಚುಂಬನ ಬಿಂಬಾಧರ ಪಾನ.
ಮತ್ತವಿಹಂಗಮ, ಸ್ವರ ಹೃದಯಂಗಮ,
ಹೊರಡಿಸುತಿವೆ ಸರಿಗಮ ತಾನ ॥35॥

ವಾಸನೆ-ಸುಮ-ಸಿಂಹಾಸನವೇರಿದ,
ಅಳಿ, ಸ್ಮರ-ಶಾಸನ ಬರೆಯುತಿದೆ.
ವನ ಮಧು, ವರ ಮಧು, ಮುಗಿಲಿನ ಮಂಟಪ,
ಶುಕ ಪಿಕ ದನಿ ಹಸೆ ಕರೆಯುತಿದೆ ॥36॥

ಗ್ರಂಥ ವಿಲೇಖನ ಭಾರವು ಇಳಿದಿದೆ,
ತತ್ವ ಸಮಾಧಿಯು ಮುಗಿದಿಹುದು
ಅವರತ್ತಬುದದನಂತರ ದೃಷ್ಟಿಯು,
ಸೃಷ್ಟಿಯ ಕಡೆಗಂದೆ ತಿರುಗಿಹುದು ॥37॥

ಸಂಜೆಯ ಸಂಧ್ಯೆಗೆ, ನದಿಗೈ ತಂದಿರೆ,
ಪ್ರಕೃತಿಯು ಕಣ್ಣನು ಸೆಳೆದಿತ್ತು.
ಇಂದ್ರಚಾಪಸೌಂದರ್ಯ ಮಯೂರವು
ಪಡುವಣದಂಚಿಗೆ ಇಳಿದಿತ್ತು ॥38॥

ಎಂದೂ ಕಾಣದ ಸಂಧ್ಯೆಯ ಸೌಂದರ್ಯ,
ಮಿಶ್ರರಿಗಂದೇ ತೋರಿತ್ತು.
ಮಸ್ತಕ ತುಂಬಾ ಪುಸ್ತಕ ತುಂಬಿದ,
ದೇಹದಿ ರಸಗಣ್ ತೆರೆದಿತ್ತು ॥39॥

ಸಂಜೆಯ ಸ್ವರ್ಣದ ವರ್ಣದ ಕಾಂತಿಯು,
ಕರಗಿರೆ ಇರುಳಿನ ಕುರುಳಿನಲಿ
ಜ್ಞಾನ ಸುಪೂರ್ಣರು ಪರ್ಣ ಕುಟೀರಕೆ,
ನಡೆದರು ತಟ-ತರು -ನೆರಳಿನಲಿ ॥40॥

ಯಾರಿದನಿಟ್ಟರು, ಅಡಿಗೆಯ ಭಟ್ಟರು,
ಶ್ರಮಪಟ್ಟರು ಯಾರೆನಗಿಲ್ಲಿ?
ಎಲೆಯನು ಇಟ್ಟರು, ನೀರನು ಕೊಟ್ಟರು,
ಮರೆಯಾಗಿಬಿಟ್ಟರು ಅವರೆಲ್ಲಿ? ॥41॥

ಹೊರಗಡೆ ಹುಡುಕಿಯು, ಒಳಗಡೆ ತಡಕಿಯು,
ಸಿಕ್ಕದೆ ಮಿಡುಕಿದರಾ ಯೋಗಿ.
ಚೊಕ್ಕ ವ್ಯವಸ್ಥೆಯ ಈ ಏರ್ಪಾಟಿನ,
ಹಿಂದಿರ್ಪರು ಯಾವನುರಾಗಿ ? ॥42॥

ಆಡುವವರಿಲ್ಲದೆ ರುಚಿ ರುಚಿ ಅಡಿಗೆಯ,
ಬಿಸಿ ಬಿಸಿ ತಾಜಾ ರಸದೂಟ
ಎಲೆಯಲಿ ಬಡಿಸಿದೆ,. ತೃಪ್ತಿಯ ಪಡಿಸಿದೆ,
ಕೈ ಕಾಣದು ಯಾರದು ಹೂಟ ! ॥43॥

ಪುನರಪಿ ಯೋಚಿಸಿ, ಮನದಿ ವಿವೇಚಿಸಿ,
ಕಣ್ಣನು ಚಾಚಿಸಿ ಆಚೀಚೆ.

ಯಾವುದು ಸಿಕ್ಕದೆ, ಸಿಕ್ಕದು ಬಿಚ್ಚದೆ,
ಗೋಜಲು ಗೋಜಲು ಎದೆ ಗೀಚಿ ॥44॥

ಸುತ್ತಲು ಮುತ್ತಲು, ಎತ್ತಲು ಕತ್ತಲು
ತಲೆಯೆತ್ತಲು, ಮುತ್ತಲು ಬನವ,
ಚಿಮಣಿಯು, ದೀಪದ ಡಮಣಿಯು, ಬೆಳಕಿನ
ಧಮನಿಯು ಮೆರೆದಿದೆ ತನ್ ತನವ ॥45॥

ಎಲೆಮನೆ-ಬಂದೀವನೆಯಲಿ, ಅಂಥಾ
ಸುರಬಂದಿತ ಮಂದಿತ -ಜ್ಯೋತಿ,
ಸೆಣಸಿದೆ, ತಿಮಿರವ ಮಣಿಸಿದೆ, ಬೆಳಕನು
ಕುಣಿಸಿದೆ ಆಶ್ರಮದೊಳು ಪೂರ್ತಿ ॥46॥

ಕತ್ತಲೆ-ಮತ್ತ-ದ್ವಿಪ-ನೆತ್ತಿಗೆ ದೀ-
-ಪಾಂಕುರ ಅಂಕುಶವಿಟ್ಟಿತ್ತು.
ತಿಮಿರಾಽವರಣ-ವಿಮುಕ್ತ-*(2)ಪ್ರಕೋಷ್ಠವು
ಬೆಳಕಿನ ಪುಳಕವ ತೊಟ್ಟಿತ್ತು. ॥47॥

ಹೃದಯದಲ್ಲಿ ಗುಹೆಯಲಿ, ಜ್ಞಾನಜ್ಯೋತಿಯ
ಕುಡಿ-ಗುಡಿಗಟ್ಟಿದ ತೆರನಲ್ಲಿ,
ಕವಿ-ಮನ-ಗವಿಯಲಿ ಪ್ರತಿಭೆಯ ಸ್ಫೂರ್ತಿಯು
ನುಡಿ-ಕಿಡಿ-ಕಡೆದಿಹ ಪರಿಯಲ್ಲಿ ॥48॥

*(2) ಪ್ರಕೋಷ್ಠ-ಕೋಣೆ

ತಾಪಸ-ವಾಚಸ್ಪತಿಗಳ ವಾಙ್ಮಯ -
-ಜಪ-ತಪ-ಸಾಧನ-ಭೂಮಿಯಲಿ,
ನಿಶ್ಚಯ-ನಿಶ್ಚಲ-ದೀಪವು ತಾನೂ
ಕುಳಿತಿತೊ? ಭಾವಸಮಾದಿಯಲಿ ॥49॥

ತಿಮಿರವ ದಬ್ಬಿತು, ಬೆಳಕದು ಹಬ್ಬಿತು
ಮೌನವು ಉಬ್ಬಿತು [1]ಕುಟಿಯಲ್ಲಿ,
ಮಿಶ್ರರ ಸಿಂಹಾಽಲೋಕನ ನಡೆಯಿತು
ಸ್ವ-ಗ್ರಂಥದ ರಸ-ಪುಟಿಯಲ್ಲಿ ॥50॥

ಆಳಕೆ ಇಳಿದರು, ಭಾವವ ತಿಳಿದರು,
ಮೌಲ್ಯವನೆಳೆದರು ಇಡಿಯಾಗಿ,
ಸಿಕ್ಕನು ಬಿಡಿಸುವ, ಕಗ್ಗವ ಬಿಚ್ಚುವ
ಬಗೆ ಮೆಚ್ಚುತ ಬಿಡಿಬಿಡಿಯಾಗಿ ॥51॥

ಶಂಕರ ಭಗವತ್ಪಾದರ ಮೇಲಿನ
ಶಂಕಾಽತಂಕ ಕಲಂಕಗಳ
ಪಂಕವು ಕೊಳೆದಿದೆ ಬಿಂಕವು ಅಳಿದಿದೆ
ಬೌದ್ಧರ ಸಾಂಖ್ಯರ ಶಂಕುಗಳು ॥52॥

ಗ್ರಂಥದ ರನ್ನಜ ಕನ್ನಡಿಯಲಿ ಶ್ರೀ-
-ವೇದವ್ಯಾಸರೆ ಮೂಡಿಹರು,
ಭಗವತ್ಪಾದರು, ಗೌಡ ಶ್ರೀಪಾದರು
ಇಡಿಕಿಡಿ ನುಡಿಯಲಿ ಆಡಿಹರು ॥55॥

ಬ್ರಹ್ಮ ಸಮಸ್ಯೆಯು, ಐಕ್ಯದ ಒಗಟುವು
ವೇದಾಂತದ ಒಳತೊಡಕುಗಳು,
ತಾವೇ ಬಿಟ್ಟಿವೆ, ಬಗೆ ತಿಳಿಗಟ್ಟಿದೆ
ಹೊಡೆದಟ್ಟಿವೆ ಮತ ಒಡಕುಗಳ ॥56॥

ಗ್ರಂಥದ ಪುಟಪುಟದಲ್ಲಿಯು ಪುಟಿದಿದೆ
ತತ್ವಜ್ಞಾನದ ಕಾರಂಜಿ,
ಶಾಸ್ತ್ರ-ಪ್ರಮೇಯದ, ಪುಂಜದ ಹಂಜಿಯ
ಗುಂಜನು ಬಿಡಿಸಿದೆ ನುಡಿ ಹಿಂಜಿ ॥57॥

ಗ್ರಂಥದ ಅಥತಃ ಇತಿ ಪರ್ಯಂತರ
ಮತ್ತೆ ಮತ್ತೆ ತಾವ್ ಓದಿದರು,
ಹಕ್ಕಿಯ ನೋಟಕೆ, ಹೆಮ್ಮೆಯು ಮಿಕ್ಕಿದೆ
ಪುನರಪಿ ಅದನೆ ನಾದಿದರು. ॥58॥

ವ್ಯಾಸರು ಬೀಸಿದ, ಸೂತ್ರದಿ ಹಾಸಿದ
ಭಾಷ್ಯದಿ ಸೂಸಿದ ಅರ್ಥಗಳ,

ಸೋಸುತ, ಆಳದಿ ಈಸುತ ಪುನಪರಿ
ಕಂಡಿಸುತ ಪುರುಷಾರ್ಥಗಳ IІ59ІІ

**ಎಸಳು ಮೂರು**

ಸಾಗಿತು ವಾಚನ, ಮನಸಿಗೆ ರೋಚನ
ಮೋದಕೆ ಮೈ ರೋಮಾಂಚನವು,
ಬಿಗಿಯಿತು ಕಂಠವು, ಬಗೆ ಉತ್ಕಂಠವು,
ಕ್ಷಣ ಹರ್ಷಾಶ್ರು ನಿಷಿಂಚನವು II60II

ಪಕ್ಕನೆ ದೀಪಕೆ ಮಕ್ಕದು ಹಿಡಿದಿದೆ
ಗಕ್ಕನೆ ನಿಂತಿತು ವಾಚನವು,
*(1) ಅಕ್ಕರ ಕಾಣದೆ ಹಕ್ಕಿ ವಿಲೋಕನ
ತಡೆಯಿತು ಪರ್ಯಾಲೋಚನವ II61II

ಮಕ್ಕಳ ಮನಸಿನ ಮಿಶ್ರರು, ಮಕ್ಕನು
ತೆಗೆಯಲು ಸೊಡರನು ಹಿಡಿದಹರು,
ಬೆರಳದು ಸುಟ್ಟರೆ, ಒರಲುತ ನರಳುತ
ಅಯ್ಯೋ ! ಅಕ್ಕಟ ನುಡಿದಿಹರು II62II

ತಕ್ಷಣ ಮಿಶ್ರರ ರಕ್ಷಣೆ-ದೀಕ್ಷೆಯ
ದಕ್ಷ-ಶುಭೇಕ್ಷಣೆ ಬಂದಿಹಳು,
ಮಿಶ್ರರ*(1) ಅಂಗುಲಿ ದಾಹಕೆ ತನ್‌ದೇ-
ಹವೆ ಬೆಂಗಿಗೆ ಎನೆ ನೊಂದಿಹಳು II63II

ಮರಗುತ ದುಃಖದಿ, ಕರಗುತ ಕೂಡಲೆ
ತನ್ ಶೀರೆಯ ಸೆರಗನೆ ಹರಿದು,
ಕಂಬನಿ ತೋಯದಿ ತೋಯಿಸಿ ಬೆರಳಿಗೆ
ಒದ್ದೆಯ ಸುತ್ತಿರೆ ಬಳಿ ಸರಿದು II64II

ಸುಟ್ಟಿಹ ಮಿಶ್ರರ ಬೊಟ್ಟದು ಒದ್ದೆಯ
ಬಟ್ಟೆಯನಾಗಲೆ ತೊಟ್ಟಿರಲು,
ಎದೆ ತಂಪಾಯಿತು, ಗಿವಿಗಿಂಪಾಯಿತು
ಕಂಕಣ ಕಿಂಕಿಣಿ ತಟ್ಟಿರಲು II65II

ಮೈ ಹಣ್ಣಾದರು, ಹೆಣ್ಣಿನ ಮಿದುಮೈ
ನುಣ್ಣನ ಸ್ಪರುಷಮ ಕಂಡಿರದ,
ಮಿಶ್ರರ ಮನಸಿಗೆ, ಹರುಷದ ವರುಷದ
ಹೊಸ ಅನುಭವ ಹಿಂದೆ ಉಂಡಿರದ II66II

ಕೌತುಕ ಕೆರಳಿತು, ಹೃದಯವು ಅರಳಿತು
ಕಣ್ಣದು ಹೊರಳಿತು ಆ ಕಡೆಗೆ,
ಬೊಟ್ಟನು ಮುಟ್ಟಲು, ಥಟ್ಟನೆ ಹುಟ್ಟಿದ
ಪುಳಕವು ತುಲುಕಿದೆ ಮಡಿಮೈಗೆ II67II

ಪತಿ ಮುದ್ದಿಸದಾ ಸತಿ ಮೈ ತಾನೇ
ಮುದ್ದೆಯಾಗಿ ಅದೊ ನಿಂತಿಹುದು,
ಬಂಗಾರದ ರಂಗದ ಅಂಗಾಂಗದಿ
ಶೃಂಗಾರದ ಸಿರಿ ಕಂತಿಹುದು II68II

**ಎಸಳು ನಾಲ್ಕು**

ಜಳಕವು ಇಲ್ಲದೆ, ಪುಳಕವು ತುಳುಕಿದ
ಮಿಶ್ರರ ದೃಷ್ಟಿಯು ಹರಿದಿಹುದು,
ಚಂದದ ಮೈಯ್ಯನು ಮುಚ್ಚದ ಶೀರೆಯ -
ಚಿಂದಿಯು ಕಂಬನಿ ಕರೆದಿಹುದು II69II

ಹಿರಿಮುತ್ತೈದೆಯ, ಸಿರಿ ಮೈ ಜಪ್ಪಿಸಿ
ಮುಪ್ಪದು ಅಪ್ಪಿಯು ಒಪ್ಪಿಹುದು,
ಆದರು ಕಾಂತಿಯ ಪೂರವೆ ನೆರೆಯಲು
ಅದರ ಲೆಕ್ಕವೆ ತಪ್ಪಿಹುದು II70II

*(1)ಆರ್ ತಪದೀತಪದಾಽತಪ ತಾಪದಿ
ತೊಳಲಿದ ಬಳಲಿದ ಮುನಿ ಮೈಗೆ,

ಮುದಿ ಮುತ್ತೈದೆಯ ಮಿದು ಕೈ ಮೆತ್ತಗೆ
ಹತ್ತಿತು ಹಿತವೆನಿಸಿತು ಮನಕೆ ॥71॥

ಬೆರಳಿಗೆ ಸೆರಗಿನ ಕರುಳಿನ ಸುರುಳಿಯ
ಸುತ್ತಿದ ಬಗೆ ಬಗೆ ಭಾವ -ವಿಮಿಶ್ರರು
ಮತ್ತೆ ನೋಡಿ ನುಡಿದರು ಕಡೆಗೆ ॥72॥

ತಂಗಿಯೆ, ಕರುಣ ತರಂಗಿಯೆ, ಮೃದು ಅಂತ-
-ರಂಗಿಯೆ ನಿಜ ನುಡಿ ನೀನಾರು !
ಹರನರ್ಧಾಂಗಿಯೆ ? ಹರಿತನ್ವಂಗಿಯೆ ?
ತಾಯೆ, ಶುಭಾಂಗಿಯೆ ದಯೆದೋರು ॥73॥

ಹಿಮಗಿರಿದರಿಯಲಿ, ಕಾನನ ಕೊರಿಯಲಿ
ಮೌನದ ಮರೆಯಲಿ ನಾನಿರುವೆ,
ಸ್ವಾಧ್ಯಾಯದಿ ವಾಙ್ಮಯ -ತಪ-ನಿರತನು
ಅನವರತವು ಗ್ರಂಥವ ಬರೆವೆ ॥74॥

ಶಂಕರ ಭಗವತ್ಪಾದರ ಕಿಂಕರ
ಸೂತ್ರ ಭಾಷ್ಯ ವ್ಯಾಖ್ಯಾನಿಸಿದೆ,
ನುಡಿಯಡಿ ಅಡಗುವ, ಒಳಗಡೆ ಗುಡುಗುವ
ಧ್ವನಿಯಲೆಗಳ ನಾನಾಲಿಸುವೆ ॥75॥

ಲೋಕವ ಮರೆತೇಕಾಂತದಿ ಬೆರೆತಿಹೆ
ಗುರು ಭಾಷ್ಯವ ಕುರಿತೀ ಯತ್ನ,
ಅರವತ್ತು ವರುಷದ ವಾಙ್ಮಯ -ತಪದಿಂದ
ಇಂದೇ ಸಿದ್ಧ ಈ ಕೃತಿರತ್ನ ॥76॥

ಓದಿದೆ ನಾದಿದೆ ಶಾಂಕರ ಭಾಷ್ಯವ
ಮಿದ್ದಿದೆ ತಿದ್ದಿದೆ ಬುದ್ಧಿಯನು,
ಪರಿರಿಸಿ ನಿರುಕಿಸಿ ಚಿಂತನ ಮಂಥನ
ಗೈಯುತ ಪಡೆದಿಹೆ ಸಿದ್ಧಿಯನು ॥77॥

ನಾನೋ ಪಾಮರ, ಗುರುವಿನ ಚಾಮರ
ಅಮರೀ ಕೃತಿಯೆಂತೊ ರೂಪಿಸಿದೆ,
ವ್ಯಾಸರ ಚಿತ್ತಟ ಭಿತ್ತಿಗೆ ಶಂಕರ
ಕೆತ್ತಿದ ಅರ್ಥ ನಿರೂಪಿಸಿದೆ ॥78॥

ಭಾಷ್ಯ ಗ್ರಂಥಕೆ ಹತ್ತಿದ ಮೆತ್ತಿದ
ಕೆಸರನು ಕಸರನು ತೊಳೆದಿಹನು,
ಪರಮತ ಖಂಡಿಸಿ, ಗುರುಮತ ಮಂಡಿಸಿ
ಕೃತಿಯಲಿ ಆಯುಷ ಕಳೆದಿಹೆನು ॥79॥

ಅಂತು, ಇಂತು ಇಂತಹ ಕೃತಿ ನನ್ನಂ
ತಹನಿಂದೆಂತಾಯಿತು ಎಂದು,
ಮತ್ತೆ ಮತ್ತೆ ನಾ ಓದುತಲಿದ್ದೆನು
ಈ ಕೃತಿ ಪುಟ ತಿರುವುತಲಿಂದು ॥80॥

ಬಿಕ್ಕುವ ದೀಪದ ಮಕ್ಕನು ತೆಗೆಯಲು
ಗಕ್ಕನೆ ಹಿಡಿದೆನು ನಾ ಪೆದ್ದ,
ಬಟ್ಟಿದು ಸುಟ್ಟಿತು, ಮೈ ಉರುಪಿಟ್ಟಿತು
ಅರಳು ಮರಳು ನಾನತಿ ಮುಗ್ಧ ॥81॥

ತಾಯಿಯೆ, ಆ ಕ್ಷಣ ನೀನಿಲ್ಲಿಗೆ ಬಂದೆ
ನೊಂದೆ ಬೆಂದೆ ಕಂಬನಿ ತಂದೆ,
ಬೆರಳಿಗೆ ಸೆರಗಿನ ಕರುಳಿನ ಸುರುಳಿಯ
ಸುತ್ತಿದೆ ತಣಿವಾಕ್ಷಣದಿಂದೆ ॥82॥

ವಿಜನ ವನಾಂತದ ಈ ಏಕಾಂತದಿ
ಇಲ್ಲಿ ಬಂದ ನೀನಾರಮ್ಮಾ ?
ನಿನ್ನಯ ತಂಪಿನ ಕೈ ಹಿಡಿದಿಹ ಪತಿ
ಪುಣ್ಯಾತ್ಮನು ಅವನಾರಮ್ಮ ? ॥83॥

**ಎಸಳು ಐದು**

ಆ ಮುತ್ತೈದೆಯು ಮಿಶ್ರರ ಮಾತಿಗೆ
ಸಂಬೋಧನಕೆ ಬೆಚ್ಚಿದಳು,

ಧಾವಿಸಿ ಬಂದಳು ಸ್ವಾಮಿ ಎಂದಳು
ಕೈಯಿಂದಲೆ ಬಾಯ್ ಮುಚ್ಚಿದಳು ॥84॥
ತಾ ಬಾಯ್ ತೆರೆದಳು ಕಂಬನಿಗರೆದಳು
ಮುತ್ತನು ಸುರಿದಳು ಬಾಯಿಂದ,
ಕೈ ಜೋಡಿಸಿದಳು ಪದ ಕೂಡಿಸಿದಳು
ನುಡಿದಳು ಗಗ್ದದ ಧ್ವನಿಯಿಂದ ॥85॥

"ತಾಯಿಯೆ" ಎನದಿರಿ" ಅಮ್ಮ "ಉಸಿರದಿರಿ"
"ತಂಗೀ" ಎಂದು ಕರೆಯದಿರಿ,
ನಾ ನಿಮ್ಮ ಮಡದಿಯು, ಕಾಲ್ಕೆಳ ಹಡದಿಯು,
"ಅಮ್ಮ"ಎಂದು ಎನ್ನಿರಿಯದಿರಿ." ॥86॥

"ನಿಮ್ಮಯ ಕಾಲಿನ ಮೂತಿಯ ಧೂಳಿಯ
ಮೌಲಿಯಲಿರಿಸುವ ನಾನಾಳು,
ಪತಿ -ಧ್ರುವ ದೃಷ್ಟಿಯಲಿರಿಸುತ ಭವ-ಶರ-
ಧಿಯ ಪಯಣಿಸುವದೆ ಸತಿಬಾಳು" ॥87॥

"ಮೂರಿಪ್ಪತ್ತರ ದೂರದ ವರುಷದಿ
ಹರುಷದಿ ಎನ್ ಕೈ ಹಿಡಿದಿಹಿರಿ,
ಅಗ್ನಿ ಸಾಕ್ಷಿಯಲಿ "ಧರ್ಮೇ ಚ ಅರ್ಥೇ ಚ ಕಾಮೇ ಚ
"ನಾತಿಚರಾಮಿ" "ನಾತಿಚರಾಮಿ" ಎಂದು ನುಡಿದಿಹಿರಿ" ॥89॥

"ಕೈಯಲಿ ಪುಸ್ತಕ, ಬಾಯಲಿ ಮಂತ್ರವು
ಕೊರಳಿಗೆ ತಾಳಿಯ ಕಟ್ಟಿದಿರಿ,
ಶಾಸ್ತ್ರದ ಪುಸ್ತಕ ನೋಡುತ, ಮಸ್ತಕ,
ಕೈ ಮೈ [1] ಶಾಸ್ತ್ರಕೆ ಮುಟ್ಟಿದಿರಿ." ॥89॥

"ಮಂತ್ರಸ್ವರದಲಿ ಮಂತ್ರಾಕ್ಷತೆಗಳ
ಎಲ್ಲೊ ಏನೋ ನೀವ್ ಉಗ್ಗಿದಿರಿ,
ನಾನಕ್ಷತೆಗಳ ತಲೆಯಲಿ ಹಾಕಲು
ಯಾಕೊ ಏನೋ ನೀವ್ ಹಿಗ್ಗಿದಿರಿ ॥90॥

[1]ಶಾಸ್ತ್ರಕೆ ಮುಟ್ಟಿದಿರಿ=ಮುಟ್ಟುವ ಶಾಸ್ತ್ರ ಮಾಡಿದಿರಿ.

ಮುದುಡಿದ ಮುಖದೆನ್ನಯ ಮೊಣಕಾಲಿಗೆ
ಅರಿಷಿಣ ಕುಂಕುಮ ಹಚ್ಚಿದಿರಿ,
ಕೈಯಲಿ ಪುಸ್ತಕ, ಕಣ್ಣೆದುರು ಹೆಣ್ಣಿರೆ
ಪುಸ್ತಕವನ್ನೇ ಮೆಚ್ಚಿದಿರಿ." ॥91॥

"ಊಟದಿ ಸೂತ್ರದ ಪಾಠವ ಮಾಡುತ
ಪಾಯಸಕುಪ್ಪನು ಬೆರಿಸಿದರಿ,
ತುಪ್ಪವ ತಪ್ಪಿಸಿ ಸಾರಲಿ ಹಳಿಗೆ
ಅದ್ಭುತ ಜನ ನಗೆ ತರಿಸಿದಿರಿ," ॥92॥

"ಹಸೆಯಲಿ ಹೆಸರನು ಹೇಳೆದಂರೆ ಜನ
"ಬ್ರಹ್ಮ ಸತ್ಯಂ ಜಗನ್ಮಿಥ್ಯಾ"
"ಮದುವೆಯು ಮಿಥ್ಯಾ ಮದುಮಕ್ಕಳೂ ಮಿಥ್ಯಾ"
ಎನೆ ಮನೆ ಜನ ಮುನಿದುದು ಸತ್ಯ" ॥93॥

"ಮದುವೆಯ ಗದ್ದಲದಲ್ಲಿಯು ಜ್ಞಾನ-ಸ
ಮಾಧಿಯಲ್ಲಿದ್ದಿರಿ ನೀವಂದು,
ಅಂತರ್ಮುಖಿಗಳು ಬದುಕಿಗೆ ನೀವು
ಮುಖಾಮುಖಿ -ನಿಂತಿರಲಿಲ್ಲೆಂದೂ ॥94॥

ಮದುವೆಯ ಕಂಕಣ ತೆಗೆಯುತ, ಗ್ರಂಥದ
ಲೇಖಕೆ ಕಂಕಣ ಕಟ್ಟಿದಿರಿ,
ಹೋಮದ ಕುಂಡದಿ, ಕಾಮದ, ಪ್ರೇ-
ಮದ, ಮೋಹದ ಆಹುತಿ ಹೊಟ್ಟಿಹಿರಿ ॥95॥

ನನ್ನಯ ಕಿವಿಯಲಿ ವಾಲೆಯು ಇದ್ದರೆ,
ತಾಡವಾಲೆ ನಿಮ್ ಕೈಯಲ್ಲಿ,
ಎನ್ನಯ ಕೊರಳಲಿ ಮಂಗಳ ಸೂತ್ರವು
ಬ್ರಹ್ಮಸೂತ್ರ ನಿಮ್ಮ ಮುಖದಲ್ಲಿ ॥96॥

ನವ ವಧುವನು ಮನೆ ತುಂಬಿಸಿಗೊಂಡಿರಿ
ಮನ ತುಂಬಿಸಿಕೊಳಲಿಲ್ಲವಳ,

ಮೂಸುವರಿಲ್ಲದೆ ಮಾಸಿತು, ಸವಿಯುವ-
ರಿಲ್ಲದೆ ಹಳಸಿತು ರಸಗವಳ ॥97॥

ಮದುವೆಯ ಶಾಸ್ತ್ರ ಮುಗಿಸುತ ಶಾಸ್ತ್ರದ
ಪಾಣಿಗ್ರಹಣವ ಮಾಡಿದಿರಿ,
ಗಿರಿ-ಕಂದರದಲಿ, ಮತಿ -ಹಂದಿರದಲಿ
ಶಾಸ್ತ್ರಸಂಸಾರವ ಹೂಡಿದಿರಿ ॥98॥

ಕಾಡಿಗೆ, ಮುನಿಗಳ ನಾಡಿಗೆ
ಜ್ಞಾನದ ಗೂಡಿಗೆ ನೀವು ನಡೆದಿಹಿರಿ,
ನನ್ನನು ಕೇಳದೆ, ಏನೂ ಹೇಳದೆ
ಹಿಮಗಿರಿ ಹಾದಿಯ ಹಿಡಿದಿಹಿರಿ ॥99॥

ಕೈಯ್ಯನು ಹಿಡಿದವನಿಗೆ ಈ *(1) ಕಾಯವ
ಒಪ್ಪಿಸಲಿಕ್ಕೆ ಕಾಯುತಲಿದ್ದೆ,
ಬಾರದ ದೂರದ ಪತಿಯನು ದೂರದೆ
ದಾರಿಕಾಯ್ದು ಬೇಯುತಲಿದ್ದೆ ॥100॥

ಮದುವೆಯ ಕಾಲದಿ ಮುಗುದೆಯು ನಾ ತಮ್ಮ
ಮುಖ ಮಂಡಲ ದಿಟ್ಟಿಸಲಿಲ್ಲ,
ನಾಚಿಕೆಗೀಚಿಕೆ ತೆಗೆದೊಗೆದಾಚೆಗೆ
ಈ ನಿಮ್ಮೆಡೆ ಮತ್ತೆ ಕಣ್ ಚಾಚಲಿಲ್ಲ ॥101॥

ಮಿಸುವಿ ಬಣ್ಣ ಮಿಂಚುವ ತಮ್ಮ ಒಮ್ಮೆ
ಚಂಚಲ ಗಣ್ಣಲಿ ನೋಡಿದ್ದೆ,
ಓಜವು ಉಕ್ಕಿದ, ತೇಜವು ಮಿಕ್ಕಿದ
ಪುನರದು ಕಾಣದೆ ತುಡಿದಿದ್ದೆ ॥102॥

ಎಲ್ಲಿಗೆ ಹೋದಿರಿ ? ಏತಕೆ ಹೋದಿರಿ?
ಓದುವದಿದೆಯೆ ನೀವಿನ್ನು !
ತೆರಳಿದಿರಾ !ತರಲಕ್ಕರೆ ಮಡದಿಗೆ
ಸಡಗರದುಡುಗೊರೆ ಮಣಿಹೊನ್ನು ! ॥103॥

ಹೆಣ್ಣಿನ ತಂದೆಯು, ಕನ್ನೆಗೆ ರನ್ನದ
ಸರ ಹೊನ್ನಿನ ಬಳೆ ಇಡಲಿಲ್ಲ,
ವರನಿಗೆ ಯೋಗ್ಯತೆ ಸರಿ ವರದಕ್ಷಿಣೆ
ನೆರೆದವರೆದುರಿಗೆ ಕೊಡಲಿಲ್ಲ ॥104॥

ಎನ್ನವ ಕೋಪವೆ ? ಮನದನು ತಾಪವೆ?
ಮಾತಿಗೆ ಲೋಪವೆ ಅದಕಾಗಿ!
ಛೇ ! ಇದು ವ್ಯರ್ಥ ಪ್ರಲಾಪವು
ಹುಟ್ಟಾ ನೀವಿರುವಿರಿ ನಿಸ್ಪೃಹಿಯಾಗಿ ॥105॥

ಈ ಹೆಂಡತಿಯಲಿ ಕಂಡಿರ ತಪ್ಪನು
ಏನಾದರು ಕುಂದು ಕೊರತೆಯನು !
ಕಪ್ಪೆಕೆಪ್ಪೆನಾ ಬೆಪ್ಪೆ ದಪ್ಪೆ ? ಏಕೆ
ನೀವೊಪ್ಪಲಿಲ್ಲ ಈ ಹರತಿಯನು ? ॥106॥

ಎಂದೋ ಒಂದಿನ ಬಂದೇ ಬರುವಿರಿ
ಎಂದೆನು ನೆನ್ದೆನು ಮನದಲ್ಲಿ,
ಬರದಿರೆ ನೊಂದೆನು, ದುಃಖದಿ ಬೆಂದೆನು
ಕಂಬನಿ ತಂದೆನು ಕೈಚೆಲ್ಲಿ ॥107॥

ಕಾದೆನು ಕಾದೆನಿ ಶಬರಿಯೆ ಆದೆನು
ಚಾತರಿ ಆದೆನು ಬಗೆಯಲ್ಲಿ,
ರಾಮನು ಬಾರದೆ, ಮೇಘವು ತೋರದೆ
ದಿಟ್ಟಿಯ ನೆಟ್ಟೆನು ಮುಗಿಲಲ್ಲಿ ॥108॥

ಗಿರಿಯಲಿ ದರಿಯಲಿ ಕೊರಿಯಲಿ ಪುರಿಯಲಿ
ಹಳ್ಳಿಯ ನೆರೆಯಲಿ ಹುಡುಕಿದೆನು,
ತಮ್ಮನು ನನ್ನಯ ತಮ್ಮನ ಜೊತೆ ನಾ-
ನೆಲ್ಲಿಯು ಕಾಣದೆ ಮಿಡುಕಿದೆನು ॥109॥

"ಹಾದಿಲಿ ಹೋಗುವ, ಬೀದಿಲಿ ಬರುವವ-
ರೆಲ್ಲರ ಕಾಲಿಗೆ ಎರಗಿದೆನು,

ನಿಮ್ಮಯ ಸುದ್ದಿಯ ದೈನ್ಯದಿ ಕೇಳುತ
ತಿಳಿಯದೆ ಮನದಲಿ ಮರಗಿದೆನು" II110II

"ವಾಚಸ್ಪತಿ"ಹೆಸರಿನ ರವಿ ತೇಜದ
ತರುಣ ತಪಸ್ವೀ ಭೂಸುರರ,
ನಾಮವ, ಗ್ರಾಮಾಃರಾಮವ, ಧಾಮವ
ತಿಳಿದಿರಾ ತೇಜೋಭಾಸುರರ ?" II111II

"ತರಣಿಯ ತೇಜದ ತರುಣರು, ಬಣ್ಣದಿ
ಅರುಣರು, ಸಾಂಕಃಕರಣಿಗಳು,
ಗುರುಚರಣದ ಪರಿಚರಣ ಪರಾಯಣ
ವಿಪ್ರರು ಕರುಣಾಭರಣಿಗಳು" II112II

"ವಿದ್ವನ್ಮಣಿಗಳು, ಭಕ್ತಿಯ ಧಣಿಗಳು
ವೇದದ ಅರಗಿಣಿಗಳು ಯೋಗಿ,
ಜ್ಞಾನದ ಗಣಿಗಳು, ದೈವಿಕಗುಣಿಗಳು
ಕಂಡರೆ ಎಲ್ಲ್ಯಾದರು ತ್ಯಾಗಿ ?" II113II

"ಸಾಧು ವಿರಕ್ತರ -ಯಾತ್ರಾಸಕ್ತರ
ಬಾವಾ-ಭಕ್ತವಿರಾಗಿಗಳ,
ಕೇಳುತಲಿದ್ದೆನು, ಬೀಳುತಲಿದ್ದೆನು
ಪಾದಕೆ ಯಾತ್ರಿಕ ಯೋಗಿಗಳ" II114II

"ಕಂಡ ಕಂಡ ಗಂಡಸರನು ಕೇಳಿದೆ
"ಕಂಡಿರೆ ನೀವ್ಯಾರರೆ ಎನ್ನ ?
ದುಂಡುಮುಖದ ಉದ್ದಂಡ ದೇಹದ,
ಚೆಂದದ ಚಲುವೆನ್ನ ಗಂಡನನ್ನ?" II115II

"ಅಣ್ಣ ಅಪ್ಪ, ನೀವ್ ನೋಡಿದಿರಾ ನಿಮ್ಮ
ಕಣ್ಣನು ಕೋರೈಸುವ ಎನ್ನ,
ಮಿಂಚುಗಣ್ಣಿನ ಮಿಸುನಿ ಬಣ್ಣದ
ತೇಜಸ್ವೀ ತಾಪಸಿಯನ್ನ ?" II116II

ತಲೆಯ ತುಂಬ ತುಂಬಿರುವ ತಿಳಿವು
ತನು ತುಂಬ ಏನೋ ಹೊಳವು
ಧೀರ ನಿಲುವು ವೇದಾಂತದೊಲವು
ಚಂದ್ರಾಮಂಥ ಚೆಲುವು ! II117II

ಮೈಯಲ್ಲಿ ಕಾಂತಿ, ಮುಖದಲ್ಲಿ ಸಾಂತಿ,
ಪ್ರಕೃತಿಯಲ್ಲಿ ಕ್ಷಾಂತಿ-ದಾಂತಿ,
ತಿಂಗಳಿನ ತುಳುಕು, ಕಂಗಳಲಿ ಬೆಳಕು
ರಸವಂತಿ ವಾಕ್ ಸ್ರವಂತಿ II118II

**ಎಸಳು ಏಳು**

ಕೊನೆಗೊಂದು ರಾತ್ರಿ, ಕಳೆದಾಗ ಧಾತ್ರಿ
ತಳೆದಾಗ ಬೆಳಕು ಜಾತ್ರಿ,
ಕೇದಾರ ಯಾತ್ರಿ ಬಂದಿದ್ದ , ನಮಗೆ
ತಂದಿದ್ದ ನಿಮ್ಮ ವಾರ್ತಿ II119II

ಇಲ್ಲಿಂದ ನೂರು, ಹರದಾರಿ ದೂರ
ದೂರ, ಕೇದಾರ ದಾರಿಯಲ್ಲಿ
ತಿಳಿನೀರ ಪೂರ, ಸುರನದಿಯ
ತೀರ, ಅಲ್ಲಿಹ ಕುಟೀರದಲ್ಲಿ II120II

ಅಲ್ಲಿ ತಂಗಿ, ತಂಗಿದ್ದೆ ನಾನು
ಯಾತ್ರಾನುಷಂಗಿ ಒಮ್ಮೆ,
ಗಾಂಗ-ಮಂಗಲ-ತರಂಗಸಂಗಿ
ಆಶ್ರಮದಿ ಕುತುಕ ಹೊಮ್ಮೆ II121II

ಅಲ್ಲಿ ಮೌನ ಮಲಗಿತ್ತು ಪರ್ಣ
ಕುಟಿಯಲ್ಲಿ ಶಾಂತಿ ಹೊದ್ದು,
ಎಚ್ಚರಿಸುತಿತ್ತು ಆಗಾಗ ಅದನು
ಶ್ರುತಿ ಮಂತ್ರಪಠಣ ಸದ್ದು II122II

ಮೌನದಲ್ಲಿ ಅಡಗಿತ್ತು ನಾದ
ಕಡೆದಿತ್ತು ನಾಕು ವೇದ,
ತತ್ವಸುಧೆಯ ಪಡೆದಿತ್ತು ಮೌನ
ಮುಡಿದಿತ್ತು ಬ್ರಹ್ಮ ಶಬುದ II123II

ಭತ್ತು-ಭಾವಣಿಯೆ ಇರದ ಅದನು
ರವಿ -ಚಂದ್ರ ಬೆಳಗುತಿಹರು,
ನಿಚ್ಚ ಹೊಳೆವ ಚಿತ್ಸೂರ್ಯನೆದುರು
ಮುಂಚಿತವೆ ಮುಳುಗುತಿಹರು II124II

ಮಿಶ್ರರ ಕಂಡೆನು, ನಾ ಮನ ಗಂಡೆನು
ಇವರೇ ನಿನ್ನಯ ಅವರು ಎಂದು.
ಪಯಣಿಗರೆಲ್ಲರು ಪ್ರಣಮಿಸುತ್ತಿದ್ದ
ಇವರೇ ಮಿಶ್ರರು ಎಂದು ಅಂದರು II125II

ಹೃದಯದ ಗುಹೆಯಲಿ ಅಡಗಿರುವವನನು
ಆ ಗುಹೆಯಲ್ಲಿಯೆ ಕಂಡವರು,
ಊಟವ ಬಿಟ್ಟರು ಆಧ್ಯಾತ್ಮದ ರಸ
ದೂಟವ ನಿತ್ಯವು ಉಂಡವರು II126II

ವಿಶ್ವದ ನಶ್ವರದೊಡಲಲಿ ಶಾಶ್ವತ
ಸತ್ಯದ ನೆಲೆಬೆಲೆ ಅರಿತವರು,
ಮಾಯೆಯ ಮಂಜನು ಹರಿದರು ಮಾಯಾ-
ಮಯನಲ್ಲಿಯೇ ತಾವ್ ಬೆರೆತವರು. !!I127II

ಹಸಿವೆಯ ತಟ್ಟುತ, ಕಾಮವ ಕುಟ್ಟುತ
ನಿದ್ದೆಯಟ್ಟುತ ದೂರದಲಿ,
ಆಶೆಯ ಮೆಟ್ಟುತ ಗುರಿಯನು ಮುಟ್ಟುತ
ಮಿಶ್ರರು ಗಂಗೆಯ ತೀರದಲಿ II128II

ಇರುವರು ಗ್ರಂಥವ ಬರೆವರು ಶೃತಿ ಸ್ಮೃತಿ
ಸವಿಗನಸುಗಳ ಕರೆವವರು,
ಅಕ್ಷರಗಳಲಾಃ ಅಕ್ಷರತತ್ವವ
ಮೂಡಿಸಿ ಹೊಸಗಣ್ ತೆರೆವವರು II129II

ಅರುಣನು ಇರುಳಿನ ಕಂಬಳಿಸುರುಳಿಯ
ಸುತ್ತುವ ಮೊದಲೇ ಏಳುವರು,
ಕರುಳಿನ ಬೆರಳಿಗೆ ಕೊರಳಿನ ಮುರಳಿಯ
ನುಡಿಸುತ ಮಂತ್ರವ ಹೇಳುವರು II130II

ಕಂಠಾಃ ಕುಂಠಿತ ಘಂಟಾನಾದದಿ
ಶಂಕರ ಕಿಂಕರರೋಂಕಾರ,
ದಶದಿಕ್ ಶಿಷ್ಯರು ಪ್ರತಿಧ್ವಿಸುತ್ತಿರೆ
ಎಲ್ಲೆಡೆ ಅದರದೆ ಠೇಂಕಾರ II131II

ತಲೆಯಲಿ ಹೊಳೆದುದು, ಮತಿಯಲಿ ತಿಳಿದುದು
ತಾಳೆಯ ವಾಲೆಯಲಿಳಿದಿಹುದು,
ಜ್ಞಾನಾಕಾಶದ ಚಿಕ್ಕೆಗಳೆಲ್ಲವ
ಲೆಕ್ಕಣಿಕೆಯು ಮುಕ್ಕಳಿಸಿಹುದು II132II

ವ್ಯಾಸರ ಸೂತ್ರ ಸುಸೂತ್ರ ಅರ್ಥೈಸುವ,
ಶಂತರ ಭಾಷ್ಯ ಅದೂಷ್ಯವಲಾ !
ಅದರ ವಿಶಿಷ್ಯಾಂತರ್ಗೂಢಾರ್ಥವ,
ಮಿಶ್ರರು ಕಂಡರಿಸಿದರು ಭಲಾ II133II

"ವ್ಯಾಸಗ್ರಂಥದ ಗ್ರಂಥಿಯ ಅರ್ಥದ
ರಸ್ಯ-ರಹಸ್ಯ-ಸ್ವಾರಸ್ಯ
ಖಚಿತೋಚಿತ ನಿಶ್ಚಿತ ಗೈಯ್ಯುವ ಈ
ಮಿಶ್ರರ ಸಾರ್ಥಕ ಆಯುಷ್ಯ " II134II
"ನೇಸರು ನೆತ್ತಿಗೆ ಏರುವ ಹೊತ್ತಿಗೆ
ತಮ್ಮಯ ಹೊತ್ತಿಗೆ ಮುಚ್ಚುವರು
ಪೂಜೆಯನಂತರ ಭೋಜನ ಗೃಹದಲಿ
ಏನೇ ಇದ್ದರು ಮೆಚ್ಚುವರು II135II

"ಕಾಡಿನ ಗೂಡಿನ ಒಡನಾಡಿಗಳು
ತೀರ್ಥಕ್ಷೇತ್ರದ ಯಾತ್ರಿಗಳು,
ಬಂದರೆ, ಏನರೆ ತಂದರೆ, ಮಿಶ್ರರು
ತಿಂದರೆ ಧನ್ಯರು ದಾತೃಗಳು" II136II

"ಗಡ್ಡೆಯೋ ಗೋಣಸೋ ಯಾವದೊ ಉಣಿಸೊ,
ಏನೋ ತಿನಿಸೋ ತಂದದ್ದು,
ಹರನ ಹಸಾದವು ಎನ್ನುತ ತಿನ್ನುವ -
ರಾಗಲೆ ಹೊಟ್ಟೆಯು ಹಸಿದಿದ್ದು." II137II

"ಯಾರೂ ಬಾರದೆ, ಏನೂ ತಾರದೆ
ಇದ್ದರು ಸಿದ್ಧರು ಉಪೋಷಣಕೆ,
ಹಸಿದರು, ಶಕ್ತಿಯು ಕುಸಿದರು, ತಪ್ಪರು
ತಮ್ಮಯ ಗ್ರಂಥ ವಿಲೇಖನಕೆ" II138II

"ಈ ಏಕಾಂತದಿ ಆ ವೇದಾಂತದ
ಸಿದ್ಧಾಂತದ ಗುಡಿ ಕಟ್ಟುವರು,
ಅದಕಾಗಿಯೇ ಬಾಯಾರಿಕೆ ನಿದ್ದೆಯ
ಹೊಟ್ಟೆಯ ಬಾಯಾರಿಕೆ ನಿದ್ದೆಯ
ಹೊಟ್ಟೆಯ ಹಸಿವೆಯ ಕಟ್ಟುವರು" II139II

"ಏಕಾದಶಿ ಶಿವರಾತ್ರಿಯು ವಾರದಿ
ವಾರಂ ವಾರಂ ಬರುತಿಹವು
ಧಾರಣಿ ಧರಣೀ ಕೂಡಿಕೆ ಪಾರಣಿ
ಪೂರಣೆಗೇ ಬರ ತರುತಿಹವು II140II

ಕಾಂತಿಯು ಕುಂದಿದೆ, ಮುಖವು ಕಂದಿದೆ
ಹರೆಸಿರಿ ಬೆಳಗೆಯ ನಿಂದಿಹುದು
ಅಂದಿಪ್ಪತ್ತರ ಹರೆಯಲ್ಲಿಯೇ ಎ-
ಪ್ಪತ್ತರ ಮುಪ್ಪಪ್ಪಿ ನಿಂದಿಹುದು II141II

ಕಂಗಳ ಅಂಗಳದಲಿ ಆ ತುಳುಕುವ
ತಿಂಗಳ ಮಂಗಳ ಕಲೆ ಕಾಂತಿ,
ಅರಿತವಗವರನು ಗುರುತಿಸಲೊಂದೆ
ಸಾಧನವಾಗಿದೆ ಸಿರಿ ಶಾಂತಿ II142II

ನಯನದ ಕಾಂತಿಯ ಕಿರಣದ ಪುಂಜವೆ
ಕೃತಶರ ಕಾಯವ ಬೆಳಗಿಹುದು,
ಒಡಕಲ ದೇಹದ ರೋಮರೋಮದಲಿ
ಅರಿವಿನ ದುಂದುಬಿ ಮೊಳಗಿಹುದು II143II

**ಎಸಳು ಎಂಟು**

ತಮ್ಮಯ (ಮಿಶ್ರರ) ಈ ಸವಿ ಸುದ್ದಿಯ ಕೇಳಿದ
ಸತಿ ನಾನತಿಶಯ ಹಿಗ್ಗಿದೆನು,
ಆದರೆ ಊಟದ ಉಪವಾಸದ ಆ
ಕತೆ ವ್ಯತೆ ಕೇಳುತ ಕುಗ್ಗಿದೆನು II144II

ಚೆಲುವಿನ ಚಂದ್ರನ ಸುಷುಮಾ -ಸಾಂದ್ರನ
ಈ ಕ್ಷಿತಿ ಇಂದ್ರನ ನಾ ಪಡೆದು,
ಧನ್ಯಳು ಸತಿ ಕುಲ ಮಾನ್ಯಳು ಆದೆನು
ಎಂದೆ ಮನದಿ ಕಂಬನಿ ಮಿಡಿದು II145II

ಮಿಶ್ರರು ಸೊರಗಿದ ವಾರ್ತೆಗೆ ಆರ್ತೆಯು
ನಾ ಮನ ಮರ ಮರ ಮರಗಿದೆನು,
ಕಂಬನಿ ಪೂರದಿ ಕರಗಿದೆನಾಗಲೆ
ಅಂತರಂಗದಲಿ ಕೊರಗಿದೆನು II146II

ಸಂತಸ ಸುದ್ದಿಯ ಹೇಳಿದ ಸಂತಗೆ
ಅನಂತ ಪ್ರಣಾಮವ ಸಲ್ಲಿಸಿದೆ,
ನಿಮ್ಮಯ ಉಪವಾಸಕೆ ಮನ ಮರಗುತ
ಮನೆಯಲಿ ಊಟವ ನಿಲ್ಲಿಸಿದೆ II147II

ಕೊರಗಿದೆ ಮರಗಿದೆ ಸೊರಗಿದೆ ದುಃಖದಿ
ಕರಗಿದೆ ಒರಗಿದೆ ನೆಲದಲ್ಲಿ,

ತೊರೆದನು ಅನ್ನವ, ಮರೆದೆನು ಬಳಗವ
ಮೈ ಮರೆದೆನು ನಿಮ್ ಧ್ಯಾನದಲಿ ॥148॥

ಊಟವ ಬಿಟ್ಟೆನು, ಕಣ್ಣೀರಿಟ್ಟೆನು
ಕಂಗೆಟ್ಟೆನು ಬಟ್ಟೆನು, ಬನ್ನ,
ಆಣೆಯ ತೊಟ್ಟೆನು, ನಿಮ್ಮನು ಕಾಣುವ -
ತನ ನಾ ಮುಟ್ಟೆನು ಏನನ್ನು ॥149॥

ಬಂದಾ ಯಾತ್ರಿಯ ಮುಖದಿಂದಲೆ ತಾವ್
ತಂಗಿದ ತಾಣದ ತಿಳಿಕೊಂಡು
ತಂದೆಯ ಒಪ್ಪಿಸಿ, ತಾಯಿಯ ತಪ್ಪಿಸಿ
ಹೊರೆಟೆನು ತಮ್ಮನ ಕರಕೊಂಡು ॥150॥

"ತುಂಗೋತ್ತುಂಗದ ಹಿಮಗಿರಿ ಶೃಂಗದ
ಅಂಗಳದಲ್ಲಿಯೆ ತಂಗಿಹಿರಿ,
ಬಾಳಿನ ಕಡಲಿನ ಒಡಲಿನ ನಂಜನು
ಗಂಗಾಧರನೊಲು ನುಂಗಿಹಿರಿ" ॥151॥
"ಸಾದರ ಸೋದರನೊಂದಿಗೆ ಹಿಮಗಿರಿ
ಕಂದರ ಏರಿದೆ, ಬಹುಶ್ರಮವ-
ಪಟ್ಟರು ಕೊನೆಗೂ ಮುಟ್ಟದೆ, ಪ್ರಕೃತಿಯೆ
ಬೆಟ್ಟದಿ ಕೊರದೀ ಆಶ್ರಮವ" ॥152॥

"ಅತಿ ಅಪರೂಪದ ರೂಪದ ತಮ್ಮೀ
ಸ್ವರೂಪವ ಗಿಟ್ಟಿಸಿ ನಾ ಕಂಡೆ,
ಹಸಿದಿಹ ಕಣ್ಣಿನ ಬಟ್ಟಲದಲಿ ತಮ್ಮ
ಬಿಂಬವ ಪ್ರತಿಬಿಂಬಿಸಿಗೊಂಡೆ" ॥153॥

"ಯಾಕೇ ಬಂದರು ಏನೇ ಅಂದರು
ಏನೇ ತಂದರು ನಿಮಗೆಲ್ಲಿ?
ಆ ಕಡೆ ಲಕ್ಷ್ಯವು ! ಎಂತಹ ದೀಕ್ಷೆಯು!
ಗ್ರಂಥ ವಿಲೇಖನ ಭರದಲ್ಲಿ" ॥154॥

"ನಮ್ಮೊಡನೆಷ್ಟೋ ಯಾತ್ರಿಗಳಿದ್ದರು
ಉದ್ದಕು ಬಿದ್ದರು ತಮ್ ಪದರೆ,
ಹಣ್ಣನು ಇಟ್ಟರು, ಹಾಲನು ಕೊಟ್ಟರು
ಶ್ರಮಪಟ್ಟರು ಮಾತಾಡುದಕೆ" ॥155॥

"ತಾವೋ ಶುದ್ಧರು, ಸಿದ್ಧರು, ಬ್ರಹ್ಮ
ಪ್ರಬುದ್ಧರು, ಬದ್ಧರು ದೀಕ್ಷೆಯಲಿ,
ಪೂತರು, ಅವದಾತರು, ಅವಧೂತರು,
ಮೌನರು ಸರ್ವರುಪೇಕ್ಷೆಯಲಿ." ॥156॥

"ಯಾತ್ರಿಗಳೊಂದಿಗೆ ನಾವಿಬ್ಬರು ಪೊರ-
ಮಟ್ಟೆವು ತಮ್ಮಯ ಪದಗಳಿಗೆ,
ಕಂಬನಿ ಸಿಂಚಿತ, ಮೈರೋಮಾಂಚಿತ
ಹರುಷದಿ ಸಂಚಿತ ಆ ಗಳಿಗೆ." ॥157॥

"ಬೆಚ್ಚುತ, ಬೆದರುತ, ಮೆಚ್ಚುತ, ಮುನಿಯುತ.
ನೆಚ್ಚುತ, ನಲಿಯುತ, ನೇಹದಲಿ,
ನಾಚುತ, ಪ್ರೇಮ ಪ್ರವಾಹದಿ ಈಸುತ
ಕುಡಿಗಣ್ ಚಾಚುತ ಸ್ನೇಹದಲಿ," ॥158॥

"ನಾನೂ ಬಂದೆನು, ಸನಿಹದಿ ನಿಂದೆನು,
ಪಾದಕೆ ವಂದನೆ ಮಾಡಿದೆನು,
'ಸ್ವಾಮಿ' ಎಂದೆನು, ಕಂಬನಿ ತಂದೆನು
ತಣಿಯದೆ ಮತ್ತೆ ಮತ್ತೆ ನೋಡಿದೆನು." ॥159॥

"ಮದುವೆಯ ಕಾಲದಿ ಮಿಂಚಿದ ಮೂರುತಿ
ಕಂಚು ಮಿಂಚು ಕಣ್ ಮಟಾಮಾಯ,
ವಂಚಿಸಿ ನನ್ನನು ಎಲ್ಲಿಗೂ ಹೋಯಿತು,
ಗೈದು ಎದೆಗೆ ಮಾಯದ ಘಾಯ." ॥160॥

"ಎಲ್ಲೆಡೆ ಹುಡುಕಿದೆ, ಸಿಕ್ಕದೆ ಮಿಡುಕಿದೆ
ಸಿಡುಕಿದೆ ನಿಮ್ಮೀ ವಂಚನೆಗೆ,

"ಕೈ ಹಿಡಿಯದೆ ನಾ ಕಾಲ್ ಹಿಡಿದಿದ್ದರೆ? "
-ಹೊಳೆಯಲಿಲ್ಲ ಇದು ಅಂದೆನಗೆ."   II161II

"ಅಂತೂ ಇಂತೂ ಮಿಲನ ಮುಹೂರ್ತವು
ಮತ್ತೆ ಬಂತು ಈ ಜೀವನದಿ,
ಬಂಜರ ನೆಲದಲಿ ಮತ್ತೆ ಹರಿಯಿತು
ಕಲಕಲ ಮಂಜುಳ ಜೀವನದಿ   II162II

**ಎಸಳು ಒಂಬತ್ತು**

ಆದರೆ ಏನಿದು! ಮರೆತೇ ಬಿಟ್ಟಿರಿ
ಗುರುತೇ ಹತ್ತದು ನಿಮಗೆನ್ನ,
ಎದುರಿಗೆ ಇದ್ದರು, ಕಾಲಿಗೆ ಬಿದ್ದರು
ಮಾತೇ ಇಲ್ಲವೊ ಮನದನ್ನ   II163II

ಪರಿಚಯ ಇಲ್ಲದೆ ಅಲ್ಲಿಗೆ ಬಂದವ
-ರೆಲ್ಲರ ಜೊತೆಗೆನ್ನನೆಣಿಸಿದಿರಿ,
ಜೀವನಯಾತ್ರೆಯ ಸಂಗಾತಿಯ ವನ
ಯಾತ್ರಿಯು ಎಂದೇ ಗಣಿಸಿದಿರಿ.   II164II

ಶಸ್ತ್ರವು ಇಲ್ಲದೆ ಇರಿದಿರಿ, ಹೊಡೆಯದೆ
ಪೆಟ್ಟನು ಕೊಟ್ಟಿರಿ ನೀವೆನಗೆ,
ಬೆಂಕಿಯು ಇಲ್ಲದೆ ಬೆಂದೆನು ಔದಾ-
ಸೀನ್ಯದಿ ನೊಂದೆನು ನನ್ನೊಳಗೆ   II165II

ಅಯ್ಯೋ ಅತ್ತೆನು, ಬದುಕಿಯು ಸತ್ತೆನು
ಸೌಭಾಗ್ಯದಿ ಈ ವೈಧ್ಯವ್ಯ,
ದೈವವ ಹಳಿದೆನು, ಬದುಕಿಯೆ ಉಳಿದೆನು
ನಿರ್ಧರಿಸಿದೆ ಈ ಅಗ್ನಿದಿವ್ಯ   II166II

ಒಂದು ವಿಚಾರವು ಬಂದಿತು, ನಿಮ್ಮ್ಯ
ಮುಂದೆನ್ನನು ನಾ ತೆರೆದಿಡಲೆ!
ನಿಮ್ಮ್ಯ ಮದುವೆಯ ಮಡದಿಯೆ ನಾನೆಂದು
ಉಸುರಲೆ ಅಥವಾ ಬರದಿಡಲೆ ?   II167II

ಮಕ್ಕಳು ಮಡದಿಯ ಹುಡದಿಯೆ ಬೇಡೆಂದು
ಅಡವಿಗೆ ದುಡು ದುಡು ಓಡಿದಿರಿ,
ಯತ್ನವ ಗೈದರು ಪತ್ನಿಗೆ ಎಟುಕದ
ಕಾಡನೆ ಗೂಡನು ಮಾಡಿದಿರಿ   II168II

ನಾರಿಯು ಸಾಧಕ ಪುರುಷಗೆ
ಅಲ್ಲವೊ ಅರಿಯೇ ಸರಿ ಎನುವ
ನಿಮಗೀ ಪತ್ನಿಯು ಪ್ರತ್ಯಕ್ಷಾದರೆ
ಮಾಡುವಿರೇನೊ ಪಲಾಯನವ !   II169II

ಲಗ್ನದಿ ಕೈಯ್ಯನು ಕೊಟ್ಟಿರಿ, ಐನಾ ನಿಮ್
ಪಾಣಿಗ್ರಹಣದ ಸತಿಯೆಂದು
ಹೇಳಲು ಮತ್ತೂ ಕೈಕೊಟ್ಟರೆ ಕಾಲ್-
ಕೀಳಲು ಎನ್ ಗತಿ ಏನ್ ಮುಂದೆ !   II170II

ಹಿಮ ಬೆಟ್ಟದ ದಟ್ಟಡವಿಯ ಮೇಲ್ಗಡೆ
ಗಿರಿ ಗರಿಗುಹೆಗಳಿಗಿಲ್ಲ ಕೊರತೆ
ನನ್ನ ಕಣ್ ತಪ್ಪಿಸಿ ಹೋದರೆ ನಿಮಗಿದೆ
ಜ್ಞಾನದ ಒರತೆಯು ಸುರಸರಿತೆ   II171II

ಹೆಣ್ಣನು ಮನುಕುಲದ್ಹುಣ್ಣನು ಭಾವಿಸಿ
ಓಡುವರೀ ವೇದಾಂತಿಗಳು,
ನಾರಿಯು ನರಕದ ದಾರಿಯು ಎನ್ನುತ
ದೂರಾಗುವರೇಕಾಂತಿಗಳು   II171II

ನಾ ನಿಮ್ ಪತ್ನಿ ಎಂದು ಗೊತ್ತಾದರೆ ನೀವ್
ಕಾಲ್ ಕಿತ್ತಿತ್ತೋ ಹೋಗುವಿರಿ,
ಇಲ್ಲವೆ ಒತ್ತಾಯದಿ ನನ್ ಹೊರಡಿಸಿ
ಯಾವದಾಯು ನನ್ನ ನೀಗುವಿರಿ   II173II

"ಪುಣ್ಯಕೆ ಎನ್ನಯ ಗುರುತೇ ಮರೆತಿದೆ
ದೊರೆತಿದೆ ಎನಗೀ ಸನ್ನಿಧಿಯು,
ಗುರುತಾದರೆ ಕೈತಪ್ಪುವದೀ ನಿಧಿ
ಬಿಡಬಾರದು ಈ ತವನಿಧಿಯು" II174II

"ಪ್ರತಿದಿನ ಎಷ್ಟೋ ಜನಗಳು ಬರುವರು
ಕೆಲದಿನ ಇರುವರು ಹೋಗುವರು,
ಯಾರೆಂದಾರನು ಎಂದೂ ಕೇಳದೆ
ಮಿಶ್ರರು ತಮ್ ಪಥ ಸಾಗುವರು." II175II

"ಇಲ್ಲಿಯೆ ಇರುವೆನು, ಕಣ್ಣಿನ ಬರವನು
ಹಿಂಗಿಸಿ ನಿಮ್ಮನು ನೋಡುವೆನು,
ನಿಮಗೇನ್ ತಿಳಿಸದೆ, ಮರೆಯಲಿ ನೆರೆಯಲಿ
ಇದ್ದೇ ಸೇವೆಯ ಮಾಡುವೆನು." II176II

"ಮದುವೆಯ ಕಾಲದಿ ಮುಗುದೆಯ ಮೊಣಕಾಲ್
ಮಧ್ಯದಿ ಹುದುಗಿದೆ ಅಡಗಿದೆನು,
ಕಣ್ಣಿಗೆ ಹುಣ್ಣಿವೆ ಹಬ್ಬವ ಮಾಡುವ
ರನ್ನನ ನೋಡಲು ನಡುಗಿದೆನು" II177II

"ಅಂತಃಪಟದಾಚೆಗೆ ನೀವ್ ನಾನೀ-
ಚೆಗೆ ಕಣ್ ಚಾಚಲು ನಾಚಿದೆನು,
ಆದರು ಸಖಿಯರ ವಂಚಿಸಿ ಕುಡಿಗಣ್
ಮಿಂಚಿಸಿ ತಲೆಮರೆಮಾಚಿದೆನು" II178II

"ತರಳೆಯ ಮರುಳೆಯ ಅರೆಚಣ ಮಿಂಚಿದ
ಕಡೆಗಣ್ಣಲಿ ನೀವ್ ಮೂಡಿದಿರಿ,
ಮನಸಿನ ನೆನಸಿನ ಕನಸಿನ ಕನ್ನಡಿ-
ಯಲಿ ಈ ವರೆಗೂ ಆಡಿದಿರಿ" II179II

"ಎದೆಯಲಿ ನಟ್ಟಿರಿ, ಹೃದಿ ಪದವಿಟ್ಟಿರಿ
ಮಾರ್ಪಟ್ಟಿರಿ ಮಾನಸ ಪತಿಯು,
ವಿರಹದ ಮೂರೂ ಮಾನಸ ವ್ಯಾಧಿಯ
ಶಮನಕೆ ಸಂಜೀವಿನಿ ಲತೆಯು." II180II

"ವ್ಯಾಸ ಪತಂಜಲಿ ಶಂಕರರೊಂದಿಗೆ
ಮಾತಾಡುತಲಿದ್ದಿರಿ ನೀವು ,
ಕೆಣಕುತ ಅವರನು, ಸೆಣಸುತ ದಣಿಸುತ,
ಸಂಭಾಷಿಸುತಲಿದ್ದಿರಿ ತಾವು" II181II

"ಪೂರ್ವಾಚಾರ್ಯರಪೂರ್ವಾಲಾಪದಿ
ತೊಡಗಿದ ಮುಳುಗಿದ ನಿಮಗಲ್ಲಿ,
ಬಂದಿಹ, ಮುಂದೇ ನಿಂದಿಹ ಮಂದಿಗೆ
ಉತ್ತರಿಸಲು ಪುರುಸತ್ತೆಲ್ಲಿ?" II182II

"ಉತ್ತರ ಬಾರದ ಭಕ್ತರು ನಡೆದರು
ಮುಂದಿನ ತಮ್ಮಯ ಪಯಣಕ್ಕೆ,
ನೀವಾಲೋಚಿಸಿ ಮನದಿ ವಿವೇಚಿಸಿ
ಹಿಡಿದಿರಿ ಮತ್ತೂ ಲೆಕ್ಕಣಿಕೆ." II183II

"ಶಾರದೆ ನುಡಿದಳು, ಭಾರತಿ ಕುಣಿದಳು
ವಾಗ್ದೇವಿಯು ಹರಿದಾಡಿದಳು,
ಅಂತರಂಗ, ಗ್ರಂಥದ ರಂಗ, ನಂತರ
ತನ್ನೆಡೆ ತಮ್ಮ ನೆಳೆದಾಡಿದಳು" II184II

"ಬಂದವರೆಲ್ಲರು ಹೋದರು, ನಂತರ
ನಿಂತೇ ನಿಂತೆವು ನಾವಲ್ಲಿ,
ಕುಂತೆವನಂತರ ಪ್ರಶ್ನಿಸಿದರೆ ನೀವ್
ಉತ್ತರಿಸುವ ಯೋಟನೆಯಲ್ಲಿ !" II185II

ಹೊತ್ತದು ಗೊತ್ತೇ ಆಗದೆ ತಮ್ಮಯ
ಹೊತ್ತಿಗೆಯಲ್ಲಿಯೇ ಹೋಗಿತ್ತು,
ಮಂಥನ ಚಿಂತನ, ಯೋಚನ ವಾಚನ
ಗ್ರಂಥ ವಿಲೇಖನ ಸಾಗಿತ್ತು II186II

ಒಳಗಡೆ ನಡೆದಿರಿ, ಕುಡಿಕೆಯ ಹಿಡಿದಿರಿ
ಕುಡಿದಿರಿ ಕಾಯದ ಹಾಲನ್ನು,
ಗೆಣಸನು ತಿಂದಿರಿ, ಉಣಿಸೇಕೆಂದಿರಿ
ಪುನರಪಿ ಕಡೆದಿರಿ ಗ್ರಂಥವನು ॥187॥

ದೇಹಕೆ ಪೋಷಣೆಯಿಲ್ಲದೆ ಸಾಗಿತು
ನಿಮ್ಮಯ ನಿತ್ಯದುಪೋಷಣೆಯು,
ವೇದದ ಬೋಧದ ನಾದದಿ ಅಡಗಿತು
ಹೊಟ್ಟೆಯ ಹಸಿವೆಯ ಘೋಷಣೆಯು ॥188॥

ಹಸಿವೆಯ ಹಿಸುಕಿದ, ನಿಮ್ಮಯ ಸೇವೆಯ
ಕೈಂಕರ್ಯಕೆ ನಾ ಹಸಿದಿದ್ದೆ,
ಕಡಲೊಡಲಲಿ ಒಡೆದೆನ್ ಬಾಳ್ ನಿಮ್ ಬಾಳ್
ದೋಣಿಯ ಹಡಗಿಗೆ ಬೆಸೆದಿದ್ದೆ. ॥189॥

**ಎಸಳು ಹತ್ತು**

ಹೆಣ್ಣನು ಕಂಡರೆ, ಹೆಂಡತಿ ಎಂದರೆ
ಟಣ್ಣನೆ ಹಾರುವಿರೆಂದು ಹೆದರಿ,
ಹೇಳದೆ, ಕಣ್ಣಿಗೆ ಬೀಳದೆ, ಇರುವೆನು
ಇಲ್ಲಿಯೆ ತಾಳದೆ ವಿರಹದುರಿ ॥190॥

ಅಥವಾ ಎಷ್ಟೆಂದರು ನೀವ್ ಗಂಡಸು
ನಾ ಹದಿಹರೆ ಹೆಂಗಸು ತಾನೇ,
ಕಣ್ಣಿಗೆ ಬಿದ್ದರೆ, ಹೃದಯವ ಕದ್ದರೆ
ನಿಮ್ಮನೆ ಗೆದ್ದರೆ ಹೆಣ್ ನಾನೇ ! ॥191॥

ನೀವೇನ್ ಕಂಡರೆ, ಮನಮುದಗೊಂಡರೆ
ರತಿ-ಸುಖವುಂಡರೆ ಹಾ ಘಾತ,
ನಿಮ್ಮಯ ಜ್ಞಾನೋಪಾಸನೆ ನಿಂತರೆ
ಅಯ್ಯೋ ಎಂಥ ಅಧಃಪಾತ! ॥192॥

ಬ್ರಹ್ಮೋಪಾಸನ, ಹೃದಿ ನಿದಿಧ್ಯಾಸನ
ತಮ್ಮಯ ಶ್ವಾಸೋಚ್ಛ್ವಾಸನವು,
ತತ್ವವಿಕಾಸನ, ಗುರು ಅನುಶಾಸನ,
ಸಲ್ಲದು ಅದರುದ್ವಾಸನವು ॥193॥

ಬೆಳಕಿನ ಬೆಟ್ಟಕೆ, ವಜ್ರದ ಪೆಟ್ಟನು
ಕೊಟ್ಟರೆ ನನಗೇ ಧಿಕ್ಕಾರ,
ಪುಣ್ಯದ ವಿದ್ಯಾರಣ್ಯವ ಸುಟ್ಟರೆ
ಹೆಣ್ಣಿನ ಜನ್ಮಕೆ ನ್ಯಕ್ಕಾರ ॥194॥

ಏನೇ ಆದರು ನಾ ನಿಮ್ ಕಣ್ಣಿಗೆ
ಬೀಳದೆ ಇರುವದೆ ಸುಕ್ಷೇಮ,
ನಿಮ್ಮಯ ಲೋಕೋದ್ಧಾರಣ ಕಾರ್ಯವು
ಸಾಗಲಿ ಅದುಮಿದೆ ಎನ್ ಕಾಮ. ॥195॥

ಆದರೆ ನಾನೆಂದಿಗೂ ನಿಮ್ಮನಗಲೆನು
ಕದಲೆನು ಈ ಸನ್ನಿಧಿಯಿಂದ,
ಕಾಣದೆ ಇರುವೆನು, ಕಾಣುತ ಇರುವೆನು,
ಮನದಣಿ ನೋಡುವೆ ಕಣ್ಣಿಂದ ॥196॥

ಮರೆಯಲಿ ಇರುವೆನು, ಮರೆಯದೆ ಇರುವೆನು.
ನೆರೆಯಲಿ ಇರುನೆನು ಗುಟ್ಟಾಗಿ,
ಸೇವೆಗೆ ಬರುವೆನು, ಪಾಕಕೆ ತರುವೆನು,
ಬೇಕಾದುದನೆಲ್ಲ ಒಟ್ಟಾಗಿ ॥197॥

"ಮೀಯಲು, ನದಿಯಲಿ ತೋಯಲು, ಆಹ್ನಿಕ
ಗೈಯಲು, ತೆರಳಲು ನೀವತ್ತ,
ಗಂಧವ ತೇಯಲು, ಸೇವೆಗೆ ಮೈ ತೇ-
ಯಲು ಬರುವೆನು ಕುಟಿ ಒಳಗಿತ್ತ" ॥198॥

"ಗುಡಿಸಲು ಗುಡಿಸುವೆ, ಥಳಿ ಸಿಂಪಡಿಸುವೆ,
ನಡೆಸುವೆ ಎಲ್ಲವೂ ಗೃಹಕೃತ್ಯ,

ಪೂಜನ, ಯಾಜನ, ಭೋಜನ, ಭಾಜನ
ಅಣಿಗೊಳಿಸುತ ನಾ ಕೃತ ಕೃತ್ಯಾ" II199II

"ಉಡುಗೆಯ ಒಗೆಯುವೆ, ಗಡಿಗೆಯ ತೊಳೆಯುವೆ
ಬೇಯಿಸತೊಡಗುವೆ ರಸದಡಿಗೆ,
ಎಲೆಯನು ಬಿಡಿಸುವೆ, ಪಾಕವ ಬಡಿಸುವೆ
ಕಣ್ಮರೆಯಾಗಿಯೇ ನಾ ತುಡುಗಿ" II200II

"ನೀವೊ ಬರುವಿರಿ, ಮನೆಗೈತರುವಿರಿ,
ಪೂಜನ, ಭೋಜನ, ಮಾಡುವಿರಿ,
ಬಿಸಿ ಬಿಸಿ ಭಕ್ಷ್ಯವ, ಆಜ್ಯವ, ಭೋಜ್ಯವ,
ಪೂಜ್ಯರು ಪ್ರತಿದಿನ ಉಣ್ಣುವಿರಿ" II201II

"ಪಾಯಸ ಸಂಡಿಗೆ, ಗರಿಗರಿ ಮಂಡಿಗೆ,
ಶ್ರೀಖಂಡವ, ರವೆ, ಉಂಡಿಗಳ,
ಉಂಡಿರಿ, ಬೂಂದಿಯ ತಿಂದಿರಿ, ಬರಿದಾ
-ಗಿಸಿ, ಬಾಸುಂದೆಯ ಗುಂಡಿಗಳ" II202II

"ಆದರೆ ಇದನಾರಿಟ್ಟರು ಸುಟ್ಟರು !
ಇಟ್ಟರು ಕೊಟ್ಟರೂ ನನಗಿಲ್ಲಿ?
ಎಂಬ ವಿಚಾರವ ಎಂದೂ ಮಾಡದೆ
ಮುಳುಗಿದ್ದಿರಿ ಲೇಖನದಲ್ಲಿ" II203II

"ನಿಮ್ಮೀ ಜ್ಞಾನ ಸಮಾಧಿಯೆ ಅಭಯದಿ
ಎನ್ನನು ಈತನ ರಕ್ಷಿಸಿದೆ,
ಈ ರಕ್ಷಾಕವಚದಿ ನಾ ನಿಲ್ಲುತ
ನಿರ್ಭಯೆ ನಿಮ್ಮನು ಈಕ್ಷಿಸುವೆ." II204II

"ಮದುವೆಯ ಸಮಯದಿ ಮುಗುದೆಯ ನಾ ತಮ್,
ಮುಖ ಮಂಡಲ ದಿಟ್ಟಿಸಲಿಲ್ಲ,
ನಾನೀಚೆಗೆ ನೀವಾಚೆಗೆ ಮಧ್ಯದಿ
ನಾಚಿಕೆ, ತೆರೆ ನಿಟ್ಟಿಸಲಿಲ್ಲ." II205II

"ನೀವೇರಿದ ಎತ್ತರ, ಬಾನ್ ಹತ್ತರ,
ನಾ ಜಗ್ಗಲು ನೀವ್ ಮುಗ್ಗರಿಸೆ,
ಸರಸತಿ ದ್ರೋಹವು, ಮಡದಿಯ ಮೋಹಕೆ,
ಶಾಸ್ತ್ರಘಾತ, ವಿಧಿ ಒಕ್ಕರಿಸೆ" II206II

"ಜ್ಞಾನಾಕಾಶದಿ, ಶಾರದೆ ತೊಡೆಯಲಿ,
ಮಿನುಗುವ ಧ್ರುವನಕ್ಷತ್ರವನು,
ಸುರುಚಿಯ ತೆರ, ನಾ ಸೆಳೆಯನು, ಕೇಳೀ-
ವನಗೈಯ್ಯನು ಈ ಕ್ಷೇತ್ರವನು." II207II

ವಾಮನ, ಜ್ಞಾನ ತ್ರಿವಿಕ್ರಮ, ಬೆಳೆಯಲಿ
ತಿಳಿಯಲಿ ಅಳೆಯಲಿ ಬ್ರಹ್ಮಾಂಡ,
ತುಳಿಯಲಿ, ಎನ್ನಯ ಕಾಮನೆ -ಬಲಿಯನು
ಮೆಟ್ಟಲು ಪಾವನ ಈ ಪಿಂಡ II208II

ಎನ್ನುವ ಭಾವನೆಯಿಂದಲೆ ಪಾವನ
ಪತಿ ಸೇವೆಯನು ಮಾಡಿದೆನು,
ಒಳಗಿರೆ ಹೊರಗಡೆ, ಹೊರಗಿರೆ ಒಳಗಡೆ,
ಕಣ್ಮುಚ್ಚಾಲೆಯ ನಾಡಿದೆನು II209II

ಮಿಸುನಿಯ ಬಣ್ಣದ ಮಿಂಚುವ ತಮ್ಮೈ
ಚಂಚಲಗಣ್ಣಿಂದ ನೋಡಿದ್ದೆ,
ಮತ್ತೊಮ್ಮೆ ಮರಳದೆ ಮರುಳೆಯು ಹೊರಳದೆ
ಆ ಮುಖನೋಡಲು ತುಡಿದಿದ್ದೆ. II210II

ಈಗಾರಂಜಿಕೆ ಎನ್ ಕಣ್ ಕಂಜಕೆ!
ಬಿಡುಗಣ್ಣಲಿ ನಾ ನೋಡುವೆನು,
ಯಾತ್ರಿಗಳೊಂದಿಗೆ ರಾತ್ರಿಯವರೆಗೂ
ತಮ್ಮನೆ ನೋಡುತ ಕೂಡುವೆನು II211II

ಎದುರಿಗೆ ಇದ್ದರು, ಕಣ್ಣಿಗೆ ಬಿದ್ದರು
ನೀನಾರೆಂದೆನ್ ಕೇಳಿಲ್ಲ,

ಸಿಕ್ಕಿದ ಇಷ್ಟಾದರು ದಕ್ಕಲಿ ಎಂದು
ಆಲೋಚಿಸಿ ನಾ ಹೇಳಿಲ್ಲ ॥212॥

**ಎಸಳು ಹನ್ನೊಂದು**

ಊಟದ ನಂತರ ವ್ಯಾಸನ ಪೀಠದಿ
ಏಸೋ ವಿಷಯದ ಚಿಂತನ ಮಂಥನ
ಗೈಯುತ ಪುನರಪಿ ನಾದುವಿರಿ ॥213॥

ಮಿದುಳಿನ ಮಡಿಲಲಿ, ಜ್ಞಾನದ ಕಡಲಲಿ
ತತ್ವಗಳೆಲ್ಲವರ ಕಡೆಯುವಿರಿ,
ಶಾಸ್ತ್ರದ ಒರೆಗಲ್ಲಿಗೆ ಅದು ತಿಕ್ಕುತ
ಸಿದ್ಧಾಂತದ ಸೊದೆ ಪಡೆಯುವಿರಿ ॥214॥

ಕೃಷ್ಣನ ಗೀತೆಯ ಋಷಿಯುಪನಿಷದವ
ವ್ಯಾಸಸೂತ್ರ ಗಲಗಲಿಸುವಿರಿ,
ಶಂಕರಂಕುರ ಹೆಮ್ಮರವಾಗಿಸಿ
ಗ್ರಂಥದ ಭಟ್ಟಿಯ ನಿಳಿಸುವಿರಿ ॥215॥

ಈ ಸಂಭ್ರಮದಲಿ ಯಾರೇ ಬಂದರು
ಏನೇ ಅಂದರು ನಿಮ್ಮ ಮುಂದೆ,
ನಿಮಗದರರಿವಿನ ಪರಿವೆಯೆ ಇಲ್ಲವು
ನಿಮಗವರೆಲ್ಲರು ಕುರಿಮಂದೆ ॥216॥

ಪೀಠವನೇರಲು, ಗ್ರಂಥದಿ ಇಳಿಯಲು
ಬಾಹ್ಯಪ್ರಪಂಚವ ಮರೆಯುವಿರಿ,
ವಾದಿ ಪ್ರತಿವಾದಿಗಳನು ಕರೆಯು
ವಾದವಿವಾದದಿ ಬೆರೆಯುವಿರಿ ॥217॥

ಸಾಯಂಕಾಲದ ತನಕವು ನಡೆವುದು
ಸತ್ತವರ್ ಜೊತೆ ಸಂಭಾಷಣವು,
ಚಿಂತನ ಮಂಥನ ಫಲಶ್ರುತಿ ಮಾಡುವ -
-ಈ ಗ್ರಂಥದ ಉನ್ಮೇಷಣವು ॥218॥

"ಆಗಲೆ ಬೇಗನೆ ನಾ ಹೊರ ಹೋಗುವೆ
ಬಾಗುವೆ ಏಗುವೆ ದೈನ್ಯದಲಿ,
ದುಡಿಯುವೆ, ದಣಿಯುವೆ, ಮಣಿಯುವೆ, ಕುಣಿಯುವೆ,
ಸಿರಿವಂತರ ಕಣ್ ಸನ್ನೆಯಲಿ." ॥219॥

"ದೂರದ ದಾರಿಯ, ಏರಿಯ ಏರಿದ
ಸಾರಿದ ದಣಿದಿಹ ಯಾತ್ರಿಗಳ, ಬಟ್ಟೆಗಳೊಗೆಯುವೆ,
ಬೆಳಗುವೆ ಭೋಜನ ಪಾತ್ರೆಗಳ" ॥220॥

"ಕುಟ್ಟುವೆ, ಕೇರುವೆ, ಅಟ್ಟುವೆ ಅಡಿಗೆಯ
ತಟ್ಟುವೆ ರೊಟ್ಟಿ ಚಪಾತಿಗಳ,
ದಣಿದಿಹ ಭಕ್ತರ ತ್ರಾಸ ನಿವಾರಿಸಿ
ಸೇವಿಪೆ ಕೇಳದೆ ಕಾಸುಗಳ" ॥221॥

"ಸೇವಾಭಾವಕೆ ಮೆಚ್ಚಿದ ಭಕ್ತರು
ಮಿಕ್ಕಿದುದೆಲ್ಲವ ನೀಡುವರು,
ಹಾಲು ಮೊಸರು ಧನಧಾನ್ಯವ ಕರುಣದಿ
ಕೊಳ್ಳಿರೆಂದು ಎನ್ನ ಬೇಡುವರು." ॥222॥

"ಆಚೆಗೆ ಬದರಿಯು, ಈಚೆಗೆ ಕೇದಾ-
ರವು ನಾನೆಲ್ಲಿಗೂ ಹೋಗಿಲ್ಲ,
ನೀವೇ ಹರಿಹರ, ಸೇವೆಯೆ ಯಾತ್ರೆಯು,
(1) ಜಿಗಮಿಷೆ ನನ್ ತಲೆ ತಾಗಿಲ್ಲ.' ॥223॥

"ಹರಿಹರ ದರ್ಶನ ಸ್ಪರ್ಶನಗೈದವ
ಪುಣ್ಯಾತ್ಮರು ಎಂದು ಸೇವಿಸುವೆ,
ಅವರನು ಸೇವಿಸಿ ಯಾತ್ರೆಯ ಮಾಡಿದ
ಪುಣ್ಯ ಬರುವೆದೆಂದು ಭಾವಿಸುವೆ" ॥224॥

"ಭಕ್ತರು ಬಳಸಿದ, ಉಳಿಸಿದ ಕಳಿಸಿದ,
ಸಾಮಗ್ರಿಯ ನಾ ತರುತಿಹೆನು,
ಅದರಲಿ ಬಗೆ ಬಗೆ ಮೃಷ್ಟಾನ್ನ ಪಾಕವ
ಗೈಯುವ ಕಾರ್ಯದಿ ನುರಿತಿಹೆನು" ॥225॥

"ಬೇಡದೆ ಕೇಳದೆ ಬಂದುದಯಾಚಿತ
'ಹರನ ಗಸಾದವು' ಎಂದಂದು,
ಬಗೆ ಬಗೆ ಭಕ್ಷ್ಯ ತಯಾರಿಸುವೆನು ತಮ-
ಗಿಕ್ಕುವೆ ಸಾಮಗ್ರಿಯ ತಂದು." II226II

"ಹಿಂದಿನ ಗುಡಿಸಲು ಎನ್ನ ನಿವಾಸವು
ನಿಮ್ಮಯ ಸೇವೆಯ ಹವ್ಯಾಸ,
ನಿಮ್ಮಯ ಯೋಗಕ್ಷೇಮವ ಗೈದರೆ
ಪ್ರಿತನು ಆಗುವನಾ ವ್ಯಾಸ" II227II

**ಎಸಳು ಹನ್ನೆರಡು (12)**

"ಎಂದೂ ಬರದ ವಿಚಾರವು ಇಂದೇ
ಏಕೋ ಬಂದಿದೆ ನಿಮ್ಮಲ್ಲಿ,
ಈ ಎಲ್ಲ ಏರ್ಪಾಡಿನ ಹಿನ್ನೆಲೆಯನು
ನೀವರಿಯಲು ಬಯಸಿದಿರಿಂದು" II228II

"ನಿಮ್ಮಯ ಬಾಳಿನ ಅಗತ್ಯದ ಪೂರಣ
ಓರಣ ಕಾರಣ ತಿಳಿಹಿದಿರಿ,
ಕೈ ಹಿಡಿದಾಕೆಯ ಜೀವವ ಹಿಡಿದಿಹ
ಉದ್ದೇಶವ ನೀವರಿತಿಹಿರಿ II229II

ನಾ ನಿಮ್ಮದುರಿಂದೇ ಬಯಲಾದೆನು
ಮುಚ್ಚಿದ ಮುಷ್ಟಿಯ ಬಿಚ್ಚಿದೆನು,
ದಾಂಪತ್ಯದ ಬಿಗಿ ಸಂಪುಟ ತೆರೆದೆನು
ಮನಸಂದರವನು ಮುಚ್ಚಿದೆನು II230II

ತಮಗ್ಗೊತ್ತಾಯಿತು ಈ ಮುತ್ತೈದೆಯು ಮ-
ತ್ತಾರೋ ಬರಿ ಯಾತ್ರಿಯು ಅಲ್ಲ,
ತಾಳಿಯ ಕಟ್ಟಿದ, ಕುಂಕುಮ ವಿಟ್ಟಿಹ
ಒಲುಮೆಯ ಮಡುಗಟ್ಟಿದ ನಲ್ಲೆ II231II

ನಿಮಮನೆ ನಂಬಿದ, ನಿಮ್ಮನೆ ನೆಚ್ಚಿಜ
ನಿಮ್ಮನೆ ಮೆಚ್ಚಿದ ನಾ ಮಡದಿ,
ವಿರಹವ ತಾಳದೆ ನಿಮಗೂ ಹೇಳದೆ
ಇಲ್ಲಿಯೆ ನಾ ಗೈದೆನು ಬಿಡದಿ II232II

ನಾರಿಯು ವೈರಿಯು ಸರ್ವಥಾ ಅಲ್ಲವು
ಸಹಕಾರಿಯು ಬಾಳ ಸಂಗಾತಿ,
ಕಾಯದ ಕೊರಡನು ತೇಯುವ, ತಂಪಿಂ
ಪೊಗೆಯುವ ಸಾಕಾರದ ಪ್ರೀತಿ II233II

ಬಾಳಿನ ಕಡಲಿನ ಒಡಲಿನ ನಂಜನು
ನಂಜುವ ನಂಜುಂಡಿ ಕಾಮಿನಿಯು,
ಸಂತಾಪಿತ ಪತಿ ದೇವಗೆ ಸಂತಸ-
ದಮೃತವ ಹಂಚುವ ಮೋಹಿನಿಯು II234II

ಕಾಯವ ಕರ್ಪೂರ ಗೈಯುತ ಗಂಡನ
ಬಾಳ್ ಬೆಳಕಾಗುವ ದೀಪಿಕೆಯು,
ಬದುಕಿನ ಬನ್ನದಿ ಬೇಗುದಿಗೊಂಡಿಹ
ಕಾಂತನ ಚಿಂತಾಲೋಪಿಕೆಯು II235II

ಪತ್ನಿಯು ಎಂದೊಡೆ ತೊರೆಯಲು ಬೇಡಿರಿ
ತೆರಳು ಯತ್ನವ ಮಾಡಿದಿರಿ,
ಮಡದಿಯು ಮಡಿಯದೆ ದುಡಿಯುತಲಿರೆ
ಸನ್ಯಾಸಿಯ ಹಾದಿಯ ಹಿಡಿಯದಿರಿ II236II

ಪೂಜ್ಯಕೆ, ತಮ್ಮಯ ಅಡಿದಾವರೆಯಲಿ
ನನ್ನದು ಒಂದೇ ಬೇಡಿಕೆಯು,
ಯಾವದೆ ತರಹದ ವಿರಹವು ಬಾರದೆ
ಚಿರಂತನವಾಗಲಿ ಕೂಡಿಕೆಯು. II237II

ನಿಮ್ಮನೆ ನೆಚ್ಚಿದ ಮೆಚ್ಚಿದ ಮಡದಿಗೆ
ಮುಚ್ಚದೆ ತೆರೆಯಿರಿ ಬಾಗಿಲವ,

ವೇದನೆ ಆತ್ಮನಿವೇದನೆ, ಸಾಧನೆ
ಸೇವನೆ, ಗೈಯಲಿ ದೇಗುಲವ ॥238॥

ಕೈಯನು ಹಿಡಿದಿರಿ, ಮೈಯ್ಯನು ಬಿಟ್ಟಿರಿ
ಹಿಡಿದಿಹ ಹೂವನ ಮೂಸಿಲ್ಲ,
ಅಂಗೀಕರಿಸಿಯು ಅರ್ಧಾಂಗಿಯ ಏ-
ಕಾಂಗಿಯ ಜೀವನ ಲೇಸಲ್ಲ ॥239॥

ಅಪ್ಪಿಯೋ ತಪ್ಪಿಯೋ ತಪ್ಪಾಗಿದ್ದರೆ
ಕ್ಷಮಿಸಿರಿ ಒಪ್ಪಿರಿ ಸೇವೆಯನು,
ನನಗೆಂದಿಗೂ ತಪ್ಪಿಸಬೇಡಿರಿ ನಿಮ್
ಸೇವನೆಗೈಯುವ ಭಾಗ್ಯವನು ॥240॥

ಬೇಡೆನು ಕಾಡೆನು, ನಿಮಗೆದುರಾಡೆನು
ಮಾಡೆನು ವಿಘ್ನವ ವಾಕ್ ತಪಕೆ,
ಬೆಳೆಯುವ ಬೆಳಕಿನ ಬೆಟ್ಟಕೆ ವಿಧ್ಯಾ-
ಟವಿ ನಾನಾಗೆನು ತಡೆಯಲಿಕೆ ॥241॥

ಇನ್ನು ಮೇಲೆ ನೀವೆನ್ನನು ತೊರೆದರೆ
ಮರೆದರೆ ಸರಿದರೆ ದೂರಲ್ಲಿ,
ಮಕ್ಕಳು ಇಲ್ಲ ದಿಕ್ಕೇಡಿಯು ನಾ-
ನಕ್ಕಟ ಇರುವದು ಯಾರಲ್ಲಿ ? ॥242॥

ಬಿಡಬೇಡಿ, ದುಃಖ ಕೊಡಬೇಡಿರಿ, ಗಂಡ-
ಬಿಟ್ಟವಳೆನ್ನಸದಿರೆನ್ನನ್ನು,
ಬಿಡುವದೆ ಆದರೆ ನಾನೇ ಬಿಡುವೆನು
ಪ್ರಾಣವ, ಬಿಡೆನೀ ಪತಿಯನ್ನು ॥243॥

ಎಸಳು ಹದಿಮೂರು
ನೀವು ಬಿಟ್ಟರೂ ಮುಪ್ಪದು ಬಿಡದೆ
ಒಪ್ಪಿತು ಅಪ್ಪಿತು ನನ್ನನ್ನು,
ಮುತ್ತಿತು ಮೆತ್ತಿತು ಬೆನ್ನೇ ಹತ್ತಿತು
ಒತ್ತಿತು ತನ್ನಯ ಛಾಪನ್ನು ॥244॥

ಬೆನ್ನದು ಬಾಗಿದೆ, ಜೀವವೆ ಮಾಗಿದೆ
ತಾಗಿದೆ ತಲೆಗೆ ಯಮಪಾಶ,
ಕಣ್ ಮಂಜಾಗಿದೆ ತಲೆ ಹಂಜಿಯಾಗಿದೆ
ಉಳಿದಿದೆ ಒಂದೇ ಮನದಾಶೆ ॥245॥

"ಮದುವೆಯ ಮೊದಲಿಂದಿದು ತನ ಮುದಿತನ
ತನಕವು ನಾ ಮುದ ಕೊಡಲಿಲ್ಲ,
ಉಡುಗೆಯ ತೊಡುಗೆಯ ರನ್ನವ ಚಿನ್ನವ
ಮುತ್ತನು ನತ್ತನು ಬೇಡಲಿಲ್ಲ" ॥246॥

"ಹಿಂದರೆ ಸಿಕ್ಕದ, ಇಂದಿಗೂ ದಕ್ಕದ
ನಿಮ್ಮಯ ತೊಡೆಯಲಿ ತಲೆಯಿಟ್ಟು,
ನಿಮ್ ಕಣ್ಣೆದುರಿಗೆ ನನ್ ಕಣ್ ಮುಚ್ಚುವೆ
ವಾಲೆ ತಿಲಕ ಕುಂಕುಮವಿಟ್ಟು" ॥247॥

"ಮುತ್ತಿನಂಥ ಮುತ್ತೈದಿಯತನದಲಿ
ಸತ್ತರೆ ಎಂತಹ ಸೌಭಾಗ್ಯ!
ಮತ್ತೂ ಮುಂದಿನ ಜನುಮದಿ ದೊರಕಲಿ
ನಿಮ್ಮಯ ಕೈ ಹಿಡಿಯುವ ಭಾಗ್ಯ " ॥248॥

"ಮನದಲಿ ಮೂಡುವ, ಮುಖದಲಿ ಆಡುವ
ತುಟಿಯಲಿ ನಲಿದಾಡುವ ಒಲಿದು,
ವಾಣಿಯ ತೆರ ನಿ ಪಾಣಿಯ ಪಿಡಿಯುವ
ಸತಿಯಾಗುವೆ ಮರುಜನ್ಮ ಪಡೆದು" ॥249॥

**ಎಸಳು ಹದಿನಾಲ್ಕು (14)**

"ಇತಿ ಸತಿ ನುಡಿಯಲು, ಚರಣವ ಪಿಡಿಯಲು
ಅಡಿಹುಡಿ ಮಡಿಯಲು ಮುಡಿಯಲ್ಲಿ
ಕಂಬನಿ ಮಿಡಿಯಲು ಮಿಶ್ರರು ತಡೆಯುತ
ಬರಸೆಳೆದರು ತಮ್ ಮಡಿಯಲ್ಲಿ" ॥250॥

"ನಲ್ಲೆಯ ತಟ್ಟುತ, ಗಲ್ಲವ ಮುಟ್ಟುತ,
ನೇವರಿಸುತ ಬಿಳಿ ಕುರುಳುಗಳ,
ಕಂಬನಿ ಸುರಿಸುತ ಚುಂಬಿಸಿ ರಂಬಿಸಿ
ಹೆಣೆದರು ಅವಳ ಬೆರಳುಗಳ ॥251॥

ಸ್ತ್ರೀ ಸುಖ ವಂಚಿತ ಮೈ ರೋಮಾಂಚಿತ
ಸಂತೋಷಾಶ್ರುನಿಷಿಂಚಿತವು,
ಗದ್ಗದ ಕಂಠವು ಬಗೆ ಉತ್ಕಂಠವು
ಗಂಟೆಯಂಥ ದನಿ ಕುಂಠಿತವು ॥252॥

ಏನಿದು ತ್ಯಾಗವು ಎಂಥ ವಿರಾಗವು
ಭೋಗವ ಪೂರಾ ಬಿಟ್ಟಿರುವೆ,
ಸಂತಸ ಧಾರೆಯ ನೆನಗೆರೆಯುವದಕೆ
ಎಷ್ಟು ಕಷ್ಟ ನೀ ಪಟ್ಟಿರುವೆ ! ॥253॥

ಹುಲ್ಲೆಯ ಗಣ್ಣಿನ ನಲ್ಲೆಯೆ, ನಿನ್ ಜೊತೆ
ನಾನೆಂದು ಸಲ್ಲಾಪ ಗೈದಿಲ್ಲ,
ಮುಗುದೆಯ ಹೃದಯದ ಬದಿಯಲಿ ಬಯಕೆಯು
ಬರೆದಿಹ ಅನಿಸಿಕೆ ಓದಿಲ್ಲ ॥254॥

ಬಾಳಿನ ನೀರಿನ ಆಳವ ತಿಳಿಯದೆ
ಓಡಾಡಿದೆ ಶಾಸ್ತ್ರಶರಧಿಯಲಿ,
ನಿನ್ನನು ದೂಡಿದೆ. ಕಡಲಿನ ಒಡಲಿನ
ವಡವಾಗ್ನಿಯ ಆ ಉರಿಯಲ್ಲಿ ॥255॥

ಅಕ್ಷರದಲ್ಲಿ ಒಂದಕ್ಷರ ಅರಸುತ
ಎರಡಕ್ಷರ ಮರೆತಿದ್ದೆ,
ಸೇವೆಗೆ ಸವೆಯುವ ನವೆಯುವ ತತ್ಫಲ
ಸವಿಯುವ ಬಗೆ ನೀನರಿತಿದ್ದೆ ॥256॥

ಬರೆಯಲು ಬಾರದ ಭಾರ್ಯೆಯ ಬದುಕಿನ
ಬೆನ್ನಿಗೆ ಬರೆಯನು ಎಳೆದಿದ್ದೆ,
ಕೈ ಹಿಡಿದಾಕೆಯ ಬಾವಿಗೆ ಹಾಕುತ
ಒಬ್ಬನೆ ಬಾಳ್ ಬಂಡಿ ಎಳೆದಿದ್ದೆ ॥257॥

ಪ್ರೇಮ ಮುಖಾಂತರ ಪರಮನ ಕಾಣುವ
ಪರತತ್ವವ ನೀನರಿತಿರುವೆ
ಸೇವಾಭಾವದ ಒಳದಾರಿಯ ನೀ
ಗುರುತಿಸಿ ನಡೆಯಲಿ ನುರಿತಿರುವೆ ॥258॥

ಶಾಸ್ತ್ರದ ಸೂತ್ರದ ತೊಡಕುಗಳೆಲ್ಲವ
ಬಿಡಿಸುತ ಕಾಲವ ನೂಕಿದೆನು
ಮಡದಿಯ ಬಾಳಿಗೆ ಗೋಳಿನ ತೊಡಕನು
ಹಾಕುತ ಅವಳ ಬಿಸಾಕಿದೆನು. ॥259॥

ನಿನ್ ಮುಖಚಂದ್ರಗೆ ಪಾಣಿಗ್ರಹಣವೆ
ಗ್ರಹಣವಾಗಿ ಬಂದು ಹಿಡಿದಿತ್ತು,
ಪರಿಪರಿ ಹರೆಸಿರಿ ಉಕ್ಕುವ ಕಾಂತಿಯ
ಮಹಾಪೂರವನೆ ತೊಡೆದಿತ್ತು ॥260॥
ಪೂರ್ಣನ ಹುಡುಕುವ ಹಂಬದಲಿ ನಮ್
ಬಾಳನೆ ಅಪೂರ್ಣವ ಮಾಡಿದೆನು.
ಅರ್ಧನೆ ವರ್ತುಲ ಎನ್ನುತ ಕೇಂದ್ರದ
ಬಿಂದು ಸಿಗದೆ ಗೋಳಾಡಿದೆನು ॥261॥

ಸಾರಥಿ ಇಲ್ಲದೆ ಬಾಳಿನ ರಥವನ್ನು
ಒಂಟಿಯಾಗಿಯೆ ನೂಕಿದೆನು,
ಹಸಿವೆಯ ಕಸಿವಿಸಿಗತಿಶಯ ಕುಸಿಯುತ
ತೇರೆಳೆಯುತ ನಾ ತೇಕಿದೆನು ॥262॥

**ಎಸಳು ಹದಿನೈದು**

ಸೆರಗಿರದಿದ್ದರು ಸೆರಗೊಡ್ಡುವೆ ನಾ
ಬೇಡುವೆ ಭಾರ್ಯೆಯೆ, ನಿನ್ನನು
ನಾ ಬಿಟ್ಟರು ನೀ ಹಿಡಿದಿಹ ಕೈಯನು
ಬಿಡದಿರು ಕೊಡದಿರು ದುಃಖವನು ॥263॥

ಇನ್ನಾದರು ನಿಮ್ ಹೃದಯದ ಹೊಲದಲಿ
ಹಸಿರಾಗಿರಲೆನ್ನ ಈ ಹೆಸರು II270II

ಓಂಕಾರವ, ಶಂಕರ ಭಾಷ್ಯವ ಪಠಿ-
ಸುವ ತಮ್ ಮುಖ, ಪಂಕಜದಿಂದ
ಕರೆಯಿರಿ ಭಾಮತಿ ಬಾ ಸತಿ ಎಂದೊಮ್ಮೆ
ಕೇಳುವೆ ನಾ ಈ ಕಿವಿಯಿಂದ II271II

ಆ ಕ್ಷಣ ಮಿಶ್ರರು ಶಂಕರ ಭಾಷ್ಯದ
ಮೇಲಿನ ತಮ್ ಗ್ರಂಥದ ಮೇಲೆ ,
ಎಂದು ಬರೆದರು ಒಪ್ಪಿತು
ಆ ಹೆಸರೇ ಇದು ವಿಧಿಲೀಲೆ II272II

ವೇಂದಾಂತದ ಆ ಗ್ರಂಥದ ಶೀರ್ಷಿಕೆ
ಅಂದಿನಿಂದ ಭಾಮತಿ ಆಯ್ತು,
ಸೇವೆಗೆ ಅರ್ಪಿತಳಾದ ತಪಸ್ವಿನಿ
ಭಾಮತಿ ಹೆಸರದು ಸ್ಥಿರವಾಯ್ತು II273II

*(1) ಭಾ=ಕಾಂತಿ
ಮತಿ=ಬುದ್ಧಿ

## ಬೆನ್ನುಡಿ

ಒಂದು ದಿನ ದೀಪದ ಸೊಡರಿಗೆ ಬಂದ ಮಕ್ಕನ್ನು ತೆಗೆಯಲಿಕ್ಕೆ ಹೋದ ಮಿಶ್ರರ ಬೆರಲು ಸುಟ್ಟು ಒದ್ದಾಡುವಾಗ ಮುಪ್ಪಿನ ಮುದುಕಿಯಾದ ಮಡದಿಯು ಅವರ ಸುಟ್ಟು ಕೈ ಬೆರಳಿಗೆ ತನ್ನ ಹರಕ ಶಿರೆಯ ಶೆರಗು ಹರಿದು ಕಣ್ಣೀರಿನಲ್ಲಿ ತೋಯಿಲಿ ಒದ್ದೆ ಬಟ್ಟೆ ಯನ್ನು ಸುತ್ತುತ್ತಾಳೆ. "ನೀನು ಯಾರು" ಎಂದು ಅವರು ಕೇಳಿದಾಗ ಅವಳು ತನ್ನ ಕರುಣ ಕತೆಯನ್ನೆಲ್ಲ ಸಾದ್ಯಂತ ಹೇಳಿ "ನಾನು ನಿಮ್ಮ ಕೈ ಹಿಡಿದ ಮಡದಿ, ಇನ್ನು ಈ ಕೈ ಬಿಡಬೇಡಿರಿ. ನನ್ನ ಕೊನೆ ಆಸೆ ನಿಮ್ಮ ಕಾಲ ಮೇಲೆ ತಲೆ ಇಟ್ಟು ಮರಣಹೊಂದಬೇಕೆಂದಿದೆ. ಈ ಬಡಜೀವಕ್ಕೆ ದಯಮಾಡಿ ಮುತ್ತೈದೆ ಸಾವನ್ನು ಕರುಣಿಸಿರಿ" ಎಂದು ದುಃಖಿಸಿ ಬೇಡಿಕೊಂಡಳು.

ಆಗ ಅವಳ ಈ ತ್ಯಾಗ, ಫಲಾಪೇಕ್ಷೆ ಇಲ್ಲದ ಸೇವೆ, ಅದಕ್ಕಾಗಿ ಅವಳು ಪಟ್ಟ ಕಷ್ಟ ನಿಷ್ಠುರಗಳ ಸಮಾಚಾರ ಕೇಳಿ ಮಿಶ್ರರು ಎದೆ ಕರಗಿ ಪ್ರೀತಿಯಿಂದ ಬಿಗಿದಪ್ಪಿ ಸಂತೈಸುತ್ತಾರೆ ಮತ್ತು ಅವಳ ತ್ಯಾಗ ತಮ್ಮ ತಪಸ್ಸುಗಳಿಂದ ರೂಪಗೊಂಡ ಆ ವೇದಾಂತಗ್ರಂಥ ತಮ್ಮ ಮಡದಿಯಾದ "ಭಾಮತಿ"ಯು ಆಧ್ಯಾತ್ಮ ಪ್ರಪಂಚಕ್ಕೆ ನೀಡಿದ ಅಮೂಲ್ಯ ಕಾಣಿಕೆ ಆದುದರಿಂದ ವಾಚಸ್ಪತಿಗಳು "ಭಾಮತಿ" ಎಂಬ ತಮ್ಮ ಹೆಂಡತಿಯ ಹೆಸರನ್ನೇ ಅವಳ ತ್ಯಾಗ ಒಲುಮೆ ಸೇವೆಗಳ ಪ್ರತೀಕವಾಗಿ ಪವಿತ್ರ ಆ ವೇದಾಂತ ಗ್ರಂಥಕ್ಕೆ ಇಡುತ್ತಾರೆ. ವೇದಾಂತ ಪ್ರಪಂಚದಲ್ಲಿಯೇ ಹೆಣ್ಣಿನ ಹೆಸರನ್ನು ಶುದ್ಧ ಆಧ್ಯಾತ್ಮಿಕ ಗ್ರಂಥಕ್ಕೆ ಯಾರೂ ಇಂದಿನವರೆಗೆ ಇಟ್ಟಿದ್ದು ಇಲ್ಲ. ಅತ್ಯಪೂರ್ವ ಹಾಗೂ ಅತಿ ಅಪರೂಪವಾದ ಈ ಘಟನೆಯನ್ನು ತಮ್ಮ ಪ್ರದೀರ್ಘವಾದ ಕಥನ ಕಾವ್ಯದಲ್ಲಿ ಸೊಗಸಾಗಿ ನಿರೂಪಿಸಿ ಆಚಾರ್ಯರು ಕನ್ನಡದ ವಾಗ್ ವೈಖರಿಗೆ ಸಂಸ್ಕೃತದ ಶಬ್ದ ಮಾಧುರಿ ಹೇಗೆ ಅಂದ ಚೆಂದವಾಗಿ ಸ್ಪಂದಿಸುತ್ತದೆ ಎಂಬುದನ್ನು ತೋರಿಸಿಕೊಟ್ಟಿದ್ದಾರೆ.

ಇದರಂತೆ ಅವರ ಕೋಲ್ಮಿಂಚು, ಗಜೇಂದ್ರ ಮೋಕ್ಷ, ವಿದ್ಯಾರಣ್ಯ, ಶ್ರವಣಕುಮಾರ, ಗಂಗಾಲಹರಿ ಮುಂತಾದ ಕಥನಕಾವ್ಯಗಳು ಸಂಸ್ಕೃತದ ಅಪ್ಪುಗೆಯಿಂದ ಮಾತೃ ಭಾಷೆಗೆ ಉತ್ತಮವಾಗಿ ಒಪ್ಪುವೆಂಬುದಕ್ಕೆ ಬರೆದವರು ಹೆಸರು ನಿದರ್ಶನವಾಗಿದೆ.

# ಕೊನೆ ಮಾತು...

ಗಂಗಾಲಹರಿ, ಅಲಖ್ ನಿರಂಜನ್, ಭಾಮತಿ, ವಿದ್ಯಾರಣ್ಯರು ಇವೆಲ್ಲವೂ ಕಟ್ಟುಕಥೆಗಳಾಗಿರಬಹುದೇ? ಇರಬಹುದು.

ಅಥವಾ ನಡೆದ ಸಣ್ಣ ಘಟನೆಗೆ ಕಾಲಸರಿದಂತೆ ಕಲ್ಪನೆಗಳು ಸೇರಿಕೊಂಡಿರಲೂಬಹುದು. ಇಷ್ಟಂತೂ ಸತ್ಯ. ಕಥಾನಕಗಳು ಹೃದ್ಯವಾಗಿವೆ. ಅಭಿವ್ಯಕ್ತ ಸಂದೇಶ ಮೌಲಿಕವಾಗಿದೆ. ಗಂಗೆಯಲ್ಲಿನ ಮಾತೃಭಕ್ತಿ ಅಲಖ್‌ನಿರಂಜನ್ ನ ಜೋಗಿಯ ನಿಷ್ಠುರ ನಿರ್ಲಿಪ್ತ ಭಾವ, ಭಾಮತಿಯ ಸಮರ್ಪಣೆ, ವಿದ್ಯಾರಣ್ಯದಲ್ಲಿನ ವಿದ್ಯಾಪಕ್ಷಪಾತ, ಸಾಧನಾ ದೀಕ್ಷೆ ಮುಂತಾದ ಗುಣಗಳು ಓದುಗರಿಗೆ ವಿಭಿನ್ನ ರಸದೂಟವನ್ನು ಒದಗಿಸುತ್ತವೆ. ಕವಿಯಮ ಮನಸ್ಸಿಗೆ ಇಂಥ ರಮ್ಯ ಕಥಾನಕಗಳನ್ನು ಪದ್ಯದ ಹದಕ್ಕೆ ಹವಣುಗೊಳಿಸಬೇಕೆಂದು ತೋರಿತೇನೋ. ಪದ್ಯ ರಚನೆಗೆ ಆಯ್ದುಕೊಂಡ ವಸ್ತು ಐತಿಹಾಸಿಕ ವಸ್ತುನಿಷ್ಠ ಸಂಗತಿಯೇ ಆಗಿರಬೇಕೆಂದಿಲ್ಲವಲ್ಲ!

ಸುಮಾರು 50 ವರ್ಷಗಳ ಹಿಂದೆ ರಚಿತವಾಗಿದ್ದ ಗಂಗಾಲಹರಿ, ಅಲಖ್‌ನಿರಂಜನ್ ಓದುಗರ ಅಪೇಕ್ಷೆಯ ಮೇರೆಗೆ ಪುನರ್ಮುದ್ರಣಗೊಳ್ಳುತ್ತಿವೆ. ನನಗೆ ತಿಳಿದಂತೆ ಆಚಾರ್ಯರು ತಮ್ಮ 86ನೇಯ ಇಳಿವಯಸ್ಸಿನಲ್ಲಿ ಭಾಮತಿ, ವಿದ್ಯಾರಣ್ಯ ರಚಿಸಿದರು. ಮತ್ತೊಮ್ಮೆ ಈ ಪದ್ಯಗಳನ್ನು ಅವಲೋಕಿಸಿದ ಬಳಿಕವೇ ಅಚ್ಚಿನ ಮನೆಗೆ ಕೊಡುವದೆಂದು ಹೇಳುತ್ತಿದ್ದರು. ಅಷ್ಟರಲ್ಲಿ ಅನಾರೋಗ್ಯದಿಂದ ಹಾಸಿಗೆ ಹಿಡಿದು ತಮ್ಮ ಬರಹಗಳನ್ನು ಗುರುತಿಸಲಾಗದ ಸ್ಥಿತಿ ತಲುಪಿದರು. ಇತ್ತೀಚೆ ಅವರ ಆರೋಗ್ಯ ಕೊಂಚ ಸುಧಾರಿಸಿದರೂ ಬರೆದುದನ್ನು ಎಡಿಟ್ ಮಾಡಲಾರರು. ಈಗ ಅವರಿಗೆ ವಯಸ್ಸು 93. ಅವರು ಬದುಕಿದ್ದಾಗಲೇ ಈ ರಚನೆಗಳು ಪ್ರಕಾಶಿತಗೊಂಡರೆ ಅದರಿಂದ ಅವರಿಗೆ ಮಾನಸಿಕ ಉತ್ಸಾಹ ದೊರೆಯಬಹುದೆಂಬ ಆಸೆಯಿಂದ ನಮ್ಮ ತಿಳುವಳಿಕೆಯ ಮಿತಿಯಲ್ಲಿ ಎಡಿಟಿಂಗ್– ಪ್ರೂಫ್ ರೀಡಿಂಗ್ ಪೂರೈಸಿ ಅವಸರದಿಂದ ಪ್ರಿಂಟಿಗೆ ಕೊಡಲಾಗಿದೆ. ಈ ಗ್ರಂಥಗಳ ಡಿ.ಟಿ.ಪಿ. ನಿರ್ವಹಣೆ, ಕರಡು ತಿದ್ದುವಿಕೆ, ಪ್ರೆಸ್ಸಿನ ಓಡಾಟ ಮುಂತಾದ ಜವಾಬ್ದಾರಿಗಳನ್ನು ಪ್ರೀತ್ಯಾದರಗಳಿಂದ ಪೂರೈಸಿದ ಸೌ.ಭಾಗ್ಯಶ್ರೀ ಮನ್ನಾರಿ ಹಾಗೂ ಶ್ರೀಯುತ ವೆಂಕಟೇಶ ಮನ್ನಾರಿ ಇವರನ್ನು ನೆನೆಯದಿರಲಾರೆ.

ಸಹೃದಯವಾಚಕರು ಹಂಸಕ್ಷೀರ ನ್ಯಾಯದಂತೆ ಇದರಲ್ಲಿನ ಗುಣಗಳನ್ನು ಗ್ರಹಿಸಿ ದೋಷಗಳನ್ನು ಕ್ಷಮಿಸುವಿರೆಂದು ಆಶಿಸುವೆ.

ಇತಿ ಸಜ್ಜನ ಸೇವಕ, ರುಕ್ಮಿಣೀತನಯ